ಮಾರ್ಚ್ – 2021

## ಲೇಖನಗಳು


* ರಂಗ ಪತಂಗ – ನಾಗಭೂಷಣ ಜ್ಯೋತಿ
* ಹದಿನಾರು ಕೆರೆಯ ಹತ್ತಾರು ಹಕ್ಕಿಗಳು – ಡಾ. ದೀಪಕ್ ಭ.
* ಕಂದು ಬೆಳವ ಅಥವ ಕಂದು ಕಪೋತ – ಶಶಿಧರಸ್ವಾಮಿ. ಹಿರೇಮಠ
* ಒಂದು ಮೊಟ್ಟೆಯ ಕಥೆ! – ಜೈಕುಮಾರ್ ಆರ್.
* ಮುಂಜಾನೆ ಮಂಜಲ್ಲಿ – ಪ್ರತಿಭಾ ಪ್ರಶಾಂತ್
* ಪ್ರಕೃತಿ ಬಿಂಬ – ಸಂತೋಷ್ ಎನ್.



**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಸೇಪುರಿ ಸಾಯಿ ಅಖಿಲ್ ತೇಜ

**ಪರಿಷ್ಕರಣೆ**

ಮುರಳಿ ಎಸ್.

ರಾಕೇಶ್ ಆರ್. ವಿ.

**ಕರಡು ತಿದ್ದುಪಡಿ**

ಡಾ.ದೀಪಕ್ ಭ., ಮೈಸೂರು





© ಶ್ರೀನಿವಾಸ್ ಕೆ. ಎಸ್.

# ಬಿಳಿ ಚಳ್ಳೆ

**ಸಾಮಾನ್ಯ ಹೆಸರು :** Dahipalas Tree

**ವೈಜ್ಞಾನಿಕ ಹೆಸರು :** *Cordia macleodii*



© ನಾಗೇಶ್ ಓ. ಎಸ್.

**ಬಿಳಿ ಚಳ್ಳೆ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ**

ಭಾರತ ಮೂಲದ ಈ ಬಿಳಿ ಚಳ್ಳೆ ಮರಗಳು, ಪಾಕಿಸ್ತಾನ ಹಾಗೂ ಬಾಂಗ್ಲಾದೇಶಗಳಲ್ಲಿನ ಒಣ ಎಲೆ ಉದುರುವ ಕಾಡುಗಳಲ್ಲಿ ಕಾಣಸಿಗುತ್ತವೆ. ವಿರಳವಾಗಿ ಕಾಣಸಿಗುವ ಇವು ಸುಮಾರು 15 ಮೀಟರ್ ಎತ್ತರದವರೆಗೆ ಬೆಳೆಯಬಲ್ಲವು. ಈ ಮರಗಳ ತೊಗಟೆಯು ಮಂದವಾಗಿದ್ದು, ತಿಳಿಕಂದು ಅಥವಾ ಹಸಿರು ಬಣ್ಣದ್ದಾಗಿರುತ್ತವೆ. ಫೆಬ್ರವರಿಯಿಂದ ಆಗಸ್ಟ್ ತಿಂಗಳವರೆಗೆ ಹೂವು ಮತ್ತು ಹಣ್ಣುಗಳನ್ನು ಬಿಡುತ್ತವೆ. ಹೂವುಗಳು ನೋಡಲು ಮಾಸಲು ಬಣ್ಣದ್ದಾಗಿದ್ದು, ಸಮೂಹವಾಗಿರುತ್ತವೆ. ಇದರಲ್ಲಿ ಗಂಡು ಹೂವುಗಳು ಬೇರೆಯಾಗಿಯೂ ಹಾಗೂ ಗಂಡು-ಹೆಣ್ಣು ಹೂವುಗಳು ಪರಸ್ಪರ ಒಟ್ಟಿಗೆ ಸಮಾವೇಶಗೊಂಡಿರುವುದನ್ನೂ ಕಾಣಬಹುದು. ಹೂವುಗಳ ದಳಗಳು ಹಿಂದಕ್ಕೆ ಮಡಿಚಿರುತ್ತವೆ. ಪುಷ್ಪಪಾತ್ರಗಳಲ್ಲಿ ನಯವಾದ ಉಣ್ಣೆಯಂತಹ ರೋಮಗಳಂತಹ ರಚನೆಯಿದೆ. ಕೇಸರಗಳು ಉದ್ದವಾಗಿದ್ದು, ಸಾಮಾನ್ಯವಾಗಿ ಸಂಖ್ಯೆಯಲ್ಲಿ 6 ಇರುತ್ತವೆ. ಹಣ್ಣುಗಳು ಹೆಚ್ಚು ಕಡಿಮೆ 12-20 ಮಿ.ಮೀ ಉದ್ದವಿರುತ್ತವೆ. ಹಣ್ಣು ಕಿತ್ತಳೆ ಬಣ್ಣವಿರುತ್ತದೆ ಹಾಗೂ ಇದರಲ್ಲೂ ಸಹ ಉಣ್ಣೆಯಂತಹ ನಯವಾದ ರೋಮದ ಹೊದಿಕೆಯಿರುತ್ತದೆ. ಹಣ್ಣು, ಪುಷ್ಪಪಾತ್ರದ ಮೇಲಿದ್ದು, ಇದರ ತುದಿಯಲ್ಲಿ ಸಣ್ಣ ಬಿಂದುವಿರುತ್ತದೆ. ಎಲೆಗಳು ಅಗಲವಾಗಿದ್ದು, ಸುಮಾರು 18 ಸೆಂಟಿಮೀಟರ್ ಉದ್ದವಿರುತ್ತದೆ. ಬಣ್ಣ ಕಡು ಹಸಿರಾಗಿದ್ದು, ಇವುಗಳ ಮೇಲ್ಮೈ ಸ್ವಲ್ಪ ಒರಟಾಗಿರುತ್ತವೆ. ಎಲೆಯ ಹಿಂಭಾಗದಲ್ಲಿ ಮುಸುಕು ಉಣ್ಣೆಯಂತಹ ದಟ್ಟ ರಚನೆಯಿದೆ ಹಾಗೂ ಎಲೆಯ ಸೀಳುಗಳು ಗಟ್ಟಿಯಾಗಿದ್ದು, ಎದ್ದು ಕಾಣುವಂತೆ ಹರಡಿಕೊಂಡಿವೆ. ಈ ಮರದ ತೊಗಟೆಗೆ ಗಾಯ ವಾಸಿಮಾಡುವ ಗುಣವಿದ್ದು, ಇದನ್ನು ಕಾಮಾಲೆ ರೋಗಕ್ಕೂ ಸಹ ಔಷಧಿಯಾಗಿ ಬಳಸುತ್ತಾರೆ. ಇದರ ಎಲೆಯನ್ನೂ ಸಹ ಬಾಯಿ ಹುಣ್ಣು ಚಿಕಿತ್ಸೆಗೆ ಬಳಸಲಾಗುತ್ತದೆ.




# ರಂಗ ಪತಂಗ

ಮೊನ್ನೆ ಫೇಸ್-ಬುಕ್ನ ಇಂಡಿಯನ್ ಮೊತ್ಸ್-ನಲ್ಲಿ ಅಪರೂಪದ ಚರ್ಚೆಯೊಂದು ನಡೆಯಿತು. ತ್ರಿಪುರಾದಿಂದ ಒಬ್ಬರು ಪತಂಗವೊಂದರ ಚಿತ್ರವೊಂದನ್ನು ತೋರಿಸಿ, ಅದರ ವೈಜ್ಞಾನಿಕ ಹೆಸರನ್ನು ತಿಳಿಸುವಂತೆ ಕೇಳಿದರು. ಇರುವ ನಾಕಾರು ಜನ ತಜ್ಞರು ಗಮನಿಸಲಿಲ್ಲವೋ ಅಥವಾ ಆ ಕೀಟ ಕುಳಿತಿರುವ ಶೈಲಿಯಿಂದ ಅದನ್ನು ಕಡೆಗಣಿಸಿದರೋ, ಅದು ಕೆಲವು ದಿನ ಹಾಗೆಯೇ ಉಳಿದುಬಿಟ್ಟಿತ್ತು. ನಾನು ನನ್ನ ಅಂದಾಜಿನಲ್ಲಿ ಊಹಿಸಿ, ಆ ಕೀಟದ ವೈಜ್ಞಾನಿಕ ಹೆಸರೊಂದನ್ನು ಹಾಕಿದೆ. ಒಂದು ದಿನದ ನಂತರ ಪತಂಗ ತಜ್ಞ – "ರೋಜರ್ ಕೆಂಡ್ರಿಕ್" ಅದನ್ನು ಗಮನಿಸಿ, ಯಾವ ಕಾರಣಕ್ಕೆ ನಾನು ಆ ಹೆಸರನ್ನು ಸೂಚಿಸಿದ್ದೇನೆ ಎಂಬುದನ್ನು ತಿಳಿಸುವಂತೆ ಬರೆದರು. ನಾನು ನನ್ನ ಗ್ರಹಿಕೆಯ ಕ್ರಮವನ್ನು ಅವರಿಗೆ ತಿಳಿಸಿದೆ. ಅದನ್ನು ಗಮನಿಸಿದ ಅವರು ಸಂಕೀರ್ಣ ವಿವರಣೆಯನ್ನು ಕೊಟ್ಟು, ವಿಸ್ತಾರವಾಗಿ ಕೀಟವನ್ನು ಗಮನಿಸಬೇಕಾದ ಕ್ರಮ, ಅದರ ಕೋಡು, ಕಾಲು ಹಾಗು ಅದರ ತಲೆಯ ಭಾಗ ಇವುಗಳನ್ನು ಗಮನಿಸಿದರೆ ನಾನು ಕೊಟ್ಟಿರುವ ಹೆಸರು, ಸರಿಯಾಗಿರುವ ಸಾಧ್ಯತೆ ಬಹಳ ಕಮ್ಮಿ ಎಂದೂ, ಮತ್ತೊಮ್ಮೆ ಪ್ರಯತ್ನಿಸುವಂತೆ ತಿಳಿಸಿ ಶುಭಾಶಯ ಹೇಳಿದರು. ನನಗೆ ತಲೆಬಿಸಿ ಪ್ರಾರಂಭವಾಯಿತು. ಅವರು ಹೇಳಿದ ಕ್ರಮದಲ್ಲಿ ಅದನ್ನು ಗಮನಿಸಿ, ಮತ್ತೊಮ್ಮೆ ಅದರ ವೈಜ್ಞಾನಿಕ ಹೆಸರನ್ನು ಸೂಚಿಸಿ, ಆ ಹೆಸರಿನ-ವಿಕಿಪಿಡಿಯಾ ಲಿಂಕನ್ನು ಜೋಡಿಸಿ ಬರೆದೆ. ಮತ್ತೊಮ್ಮೆ ಕೆಂಡ್ರಿಕ್, ನಾನು ಕೊಟ್ಟ ಹೆಸರಿನಲ್ಲಿ ಆ ಕೀಟದ ಕುಟುಂಬಕ್ಕೆ ಸೇರಿದ ಇನ್ನೂ ಹತ್ತಾರು ಕೀಟಗಳಲ್ಲಿ ಯಾವುದು ನಾನು ಸೂಚಿಸಿದ ಹೆಸರು ಎಂಬುದನ್ನು ಗಮನಿಸುವಂತೆ ತಿಳಿಸಿ ಮತ್ತೊಂದು ಕೊಂಡಿಯನ್ನು ಲಿಂಕ್ ಮಾಡಿದರು.




ನಾನು ಈ ವಿಷಯವನ್ನು ಬಹಳ ಸರಳೀಕರಿಸಿ ಹೇಳಿದ್ದೇನಾದರು, ವಾಸ್ತು ವಿಷಯ ಹಾಗಿಲ್ಲ, ಆ ಕೀಟ ಸಿಕ್ಕಿದ್ದು ತ್ರಿಪುರಾದಲ್ಲಿ, ನಾನು ಕೊಟ್ಟ ಹೆಸರು ಆ ಕೀಟದ ವೈಜ್ಞಾನಿಕ ಹೆಸರಾದರೂ, ಅದರ ಕುಟುಂಬದಲ್ಲೇ ಬೇರೆ-ಬೇರೆ ಹೆಸರುಗಳಿರುವ ಸಾಧ್ಯತೆ ಹೆಚ್ಚು. ಅದರಲ್ಲೂ ಪತಂಗದಂತಹ ಬಹಳ ಸಂಕೀರ್ಣ ಜೀವಿಗಳಿಗೆ ಹೆಸರನ್ನು ನೀಡುವುದು ಅತ್ಯಂತ ತಲೆಬೇನೆ ಕೆಲಸ. ನಮ್ಮ ದೇಶದಲ್ಲಿಯೇ ಸರಿಸುಮಾರು 3000 ದಿಂದ 4000 ಕುಟುಂಬಗಳಿಗೆ ಸೇರಿದ ಸರಿ ಸುಮಾರು 15,000 ಪತಂಗದ ಪ್ರಭೇದಗಳಿರಬಹುದೆಂಬ ಅಂದಾಜಿದೆ. ಆ 15,000 ಹೆಸರುಗಳಲ್ಲಿ ಒಂದನ್ನು ಆಯ್ಕೆ ಮಾಡಿ, ಅದರ ವೈಜ್ಞಾನಿಕ ಹೆಸರನ್ನು ನೀಡಬೇಕು. ರೋಜರ್ ಕೆಂಡ್ರಿಕ್ ಕಳೆದ 27 ವರ್ಷಗಳಿಂದ ಪತಂಗಗಳ ವೀಕ್ಷಣೆ ಹಾಗೂ ಅಧ್ಯಯನ ನಡೆಸುತ್ತಾ ಬಂದವರು. ಈ ವಿಷಯದಲ್ಲಿ ಅಧಿಕೃತವಾಗಿ ಮಾತಾಡಬಲ್ಲವರು. ಹಾಗಾಗಿ ಅವರು ನೀಡಿದ ಸಲಹೆ, ಸೂಚನೆಯನ್ನು ಕಡೆಗಣಿಸುವಂತಿರಲಿಲ್ಲ. ಕಳೆದ ನಾಕಾರು ವರ್ಷಗಳಿಂದ ನನ್ನ ಪರಿಸರದಲ್ಲಿ ಇರಬಹುದಾದ ಪತಂಗಗಳ ವೀಕ್ಷಣೆ ನಡೆಸಿರುವ ನಾನೂ ಕೆಲವು ಬಾರಿ ಕೈ ಚೆಲ್ಲಿ ಕುಳಿತಿದ್ದೇನೆ, ಆದರೆ ನಾನು ವೀಕ್ಷಣೆ ಹಾಗೂ ದಾಖಲಾತಿಯನ್ನು ನಿಲ್ಲಿಸಿಲ್ಲ. ಏಕೆಂದರೆ ವರ್ಷದಿಂದ ವರ್ಷಕ್ಕೆ ನನ್ನ ಪರಿಸರದಲ್ಲೇ ಇಲ್ಲಿಯವರೆಗೂ ಗಮನಿಸದೆ ಇರುವಂತಹ ಪತಂಗ ಪ್ರಭೇದಗಳು ಇರುವ ಸಾಧ್ಯತೆ ಇದೆ. ಪತಂಗಗಳು ನಮ್ಮ ಪರಿಸರದ ಬಹು ಮುಖ್ಯವಾದ ಜೀವ ಪ್ರಭೇದಗಳೆಂದು ಜೀವಶಾಸ್ತ್ರಜ್ಞರು ಹೇಳುತ್ತಾರೆ. ಹಕ್ಕಿ, ಮಿಡತೆ, ಜೇಡ, ಕಣಜ, ಹಾವು, ಹಾವುರಾಣಿ, ಓತೀಕ್ಯಾತ, ಹಲ್ಲಿಯ ಪ್ರಭೇದದ ಜೀವಿಗಳಿಗಲ್ಲದೆ ಕಪ್ಪೆಯಂತಹ ಉಭಯವಾಸಿ ಜೀವಿಗಳಿಗೂ ಪತಂಗ ಬಹುಮುಖ್ಯವಾದ ಆಹಾರ. ಇನ್ನೂ ಕೆಲವು ಪತಂಗಗಳು ಇರುವೆ ಪ್ರಭೇದದ ಭೂ ವಾಸಿಗಳಿಗೂ ಆಹಾರವಾಗುತ್ತವೆ.

ಜೂನ್ ತಿಂಗಳ ಒಂದು ರಾತ್ರಿ ಊಟಕ್ಕೆ ಕುಳಿತಿದ್ದೆ. ಪರಿಚಯದವರೊಬ್ಬರು ಕರೆಮಾಡಿ, ಈ ತಕ್ಷಣ ತಮ್ಮ ಅಂಗಡಿಗೆ ಬರಬೇಕೆಂದು, ತಾವು ಈವರೆಗೆ ನೋಡದೆ ಇರುವ ಚಿಟ್ಟೆಯೊಂದು ಎಲ್ಲಿಂದಲೋ ಹಾರಿಬಂದು ತಮ್ಮ ಅಂಗಡಿಯಲ್ಲಿ ಕುಳಿತಿರುವುದಾಗಿಯೂ, ಅದು ಹಾರಿ ಹೋಗುವ ಮೊದಲೇ ಬರಬೇಕೆಂದು ಕರೆಮಾಡಿದ್ದರು. ಗಡಿಬಿಡಿಯಲ್ಲಿ ಊಟ ಅರ್ಧಕ್ಕೆ ನಿಲ್ಲಿಸಿ ಹೊರಟೆ. ಶಿವಮೊಗ್ಗ-ಹರಿಹರ ಹೆದ್ದಾರಿಯ ಬದುವಿನ ಸಣ್ಣ ಅಂಗಡಿಯೊಂದರ ಮೂಲೆಯ ಮರದ ತುಂಡೊಂದರ



ಮೇಲೆ ಆ ಪತಂಗ ಕುಳಿತಿತ್ತು. ಭಾರತದ ಅತ್ಯಂತ ಸುಂದರ ದೊಡ್ಡ ಪತಂಗಗಳಲ್ಲಿ ಒಂದಾದ 'ಸಾಟರ್ನಿಡೆ' ಕುಟುಂಬದ, ಭಾರತದ ವಿಶೇಷ ತಳಿಯಾದ 'ಇಂಡಿಯನ್ ಮೂನ್ ಮಾಥ್' ಎಂದು ಸಾಮಾನ್ಯ ಹೆಸರಿನಿಂದ ಕರೆಯಲಾಗುವ 'ಆಕ್ಟಿಯಾಸ್ ಸೆಲೆನ' ಎನ್ನುವ ಪತಂಗ ಅದಾಗಿತ್ತು. ಈ ಸಾಟರ್ನಿಡೆ ವರ್ಗದ ಪತಂಗಗಳು ದಟ್ಟಕಾಡಿನಲ್ಲಿ ಹಾಗೂ ಅಂತಹ ಕಾಡಿನ ಅಂಚಿನಲ್ಲಿ ಮಾತ್ರವೇ ಸಿಗಬಹುದು ಎಂದು ಭಾವಿಸಿದ್ದ ನಾನು, ನಮ್ಮ ಊರಿನ ಸುತ್ತಮುತ್ತ ಕಾಣುವ ಕುರುಚಲು ಕಾಡಿನಲ್ಲೂ ಇರುವುದನ್ನು ಕಂಡು ಅತ್ಯಂತ ಗಲಿಬಿಲಿಗೆ ಒಳಗಾದೆ. ಈ ವರ್ಗದ ಇನ್ನೊಂದು ಪತಂಗ - ಆಕ್ಟಿಯಾಸ್ ಮಾಯಿನಸ್ ಭಾರತದ ಈಶಾನ್ಯ ರಾಜ್ಯಗಳಲ್ಲಿ ಮಾತ್ರವೇ ಕಂಡು ಬಂದಿವೆ. ಪಶ್ಚಿಮ ಘಟ್ಟದ ದಟ್ಟ ಕಾಡುಗಳಲ್ಲಿ ಈ ವರ್ಗದವು ಕಂಡುಬರುತ್ತವೆ. ಇನ್ನು ಈ ಸಾಟರ್ನಿಡೆ ಕುಟುಂಬಕ್ಕೆ ಸೇರಿದ, ಜೀವ ಸಂಕುಲದಲ್ಲೇ ಅತ್ಯಂತ ದೊಡ್ಡದಾದ 'ಅಟ್ಲಸ್ ಪತಂಗ' (ಅಟ್ಲಸ್ ಅಟ್ಟಕಸ್) ಭಾರತದ ಈಶಾನ್ಯ ರಾಜ್ಯಗಳಲ್ಲಿ ಮಾತ್ರವಲ್ಲದೆ, ಪಶ್ಚಿಮ ಘಟ್ಟವೂ ಸೇರಿ, ಕರ್ನಾಟಕದ ತುಮಕೂರು ಜಿಲ್ಲೆಯ ಕುರುಚಲು ಕಾಡಿನಲ್ಲಿಯೂ ಕಾಣಸಿಗುತ್ತವೆ. ಹೆಚ್ಚು ಕಡಿಮೆ ಒಂಬತ್ತು ಸೆಂಟಿಮೀಟರ್ ಉದ್ದ-ಅಗಲದ ಅಟ್ಲಸ್ ಪತಂಗದ ಹತ್ತಾರು ಉಪ ತಳಿಗಳು ಜಗತ್ತಿನಾದ್ಯಂತ ಕಂಡು ಬರುತ್ತವೆ. ದಕ್ಷಿಣ ಅಮೆರಿಕಾದ ಅಮೆಝಾನ್ ನದಿಕಣಿವೆಯ ದಟ್ಟಕಾಡುಗಳಲ್ಲಿ ಈ ಪತಂಗಗಳ ವೈವಿಧ್ಯತೆ ಹೆಚ್ಚು.


© ನಾಗೇಶ್ ಓ. ಎಸ್.

ಪತಂಗಗಳ ಜೀವಿತಾವಧಿ ಸಾಮಾನ್ಯವಾಗಿ ಕೇವಲ ಮೂರು ತಾಸಿನಿಂದ ಹಿಡಿದು ಒಂದು ವರ್ಷ. ಅತ್ಯಂತ ಸಣ್ಣ ಗಾತ್ರದ ಪತಂಗ ಕೇವಲ ಒಂದೆರಡು ತಾಸಿನಿಂದ ಕೆಲವು ದಿನಗಳು ಮಾತ್ರ ಬದುಕಿರುತ್ತವೆ. ಆ ಕಾಲಾವಧಿಯಲ್ಲಿ ಅವು ಹೆಣ್ಣು-ಗಂಡು ಕೂಡಿ ಕೆಲವೇ ತಾಸುಗಳ ಅಂತರದಲ್ಲಿ ತಮ್ಮ ಆಹಾರವಾದ ಸಸ್ಯಗಳ ಎಲೆಯ ಮೇಲೆ ಅಥವಾ ಕೆಳಭಾಗದಲ್ಲಿ ಮೊಟ್ಟೆ ಇಡುತ್ತವೆ. ತಮ್ಮ ಸಂಕುಲಗಳ ಜೀವಿತಾವಧಿಯನ್ನು ಆಧರಿಸಿ ಮೊಟ್ಟೆಯಿಂದ ಹೊರಬಂದ ಲಾರ್ವ ಹುಳುಗಳು, ದಿನಮಾತ್ರದಲ್ಲಿ ಆ ಸಸ್ಯದ ಎಲೆಯನ್ನೆಲ್ಲಾ ತಿಂದು, ಕಂಬಳಿ ಹುಳುವಿನ ರೂಪತಾಳಿ, ಕೊನೆಗೆ ಕೋಶಾವಸ್ಥೆಗೆ ಜಾರಿ, ಪತಂಗಗಳಾಗಿ ಲೋಕಸಂಚಾರಕ್ಕೆ ಹೊರಬರುತ್ತವೆ. ತಮ್ಮ ಮುಂದಿನ ಪೀಳಿಗೆಯನ್ನು ಬೆಳೆಸಲು ವಿರುದ್ಧ ಲಿಂಗಗಳ ಹುಡುಕಾಟದಲ್ಲಿ ತೊಡಗುತ್ತವೆ.




ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ಬೆಟ್ಟಪ್ರದೇಶದ ಹಳ್ಳದ ಬಳಿ ಇದ್ದೆ. ಆ ಹಳ್ಳದ ಬದುವಿನಲ್ಲಿ ಮುರುಗಲು ಮರವೊಂದು ಬೆಳೆದು ನಿಂತಿತ್ತು. ಚಳಿಗಾಲದ ಪ್ರಾರಂಭದ ದಿನಗಳಾದ್ದರಿಂದ ಮರದ ಎಲೆಗಳೆಲ್ಲಾ ಅರೆ ಹಳದಿ-ಕೆಂಬಣ್ಣಕ್ಕೆ ತಿರುಗಿ ಉದುರಲು ಪ್ರಾರಂಭಿಸಿದ್ದವು. ಮರ ಸುಮಾರು ಮೂರಡಿಯ ಸುತ್ತಳತೆಯನ್ನು ಹೊಂದಿ 14 ರಿಂದ 18 ಅಡಿಯವರೆಗೂ ಬೆಳೆದುನಿಂತಿತ್ತು. ಹಳ್ಳದ ಸಮೀಪದಲ್ಲಿ ಇದ್ದುದರಿಂದಲೋ ಏನೋ ಮರದ ಸುತ್ತಲೂ ಮೂರು-ನಾಲ್ಕು ಅಡಿ ದೂರದಲ್ಲಿ ಲಂಟನಾ, ಮತ್ತಿತರ ಪ್ರಭೇದದ ಮುಳ್ಳು ಗಿಡಗಳಿಂದ ತುಂಬಿಹೋಗಿ, ಮರದ ಬೊಡ್ಡೆಗೆ ಸಾಕಷ್ಟು ನೆರಳು ಬೀಳುವಂತಿತ್ತು. ಆ ಮರದ ಸಮೀಪಕ್ಕೆ ಹೋಗಿ ಮೇಲ್ಭಾಗದಿಂದ ಮರವನ್ನು ಗಮನಿಸತೊಡಗಿದೆ. ಮರ ಸಾಕಷ್ಟು ಎತ್ತರ ಇರುವುದರಿಂದ ಯಾವುದಾದರೂ ಹಕ್ಕಿಯ ಗೂಡು ಇರಬಹುದೆಂದು ನನ್ನ ಎಣಿಕೆಯಾಗಿತ್ತು. ಮರದ ಬೊಡ್ಡೆಯ ಸಮೀಪಕ್ಕೆ ನನ್ನ ಗಮನಹರಿಯಿತು. ಬೊಡ್ಡೆಯ ಸುತ್ತಲೂ ಹಿಡಿಯಷ್ಟು ರೇಷ್ಮೆಯಂತಹ ಹಿಂಜಿದ ಹತ್ತಿ ಮೆತ್ತಿದಂತಿತ್ತು. ಕುತೂಹಲದಿಂದ ಕುಳಿತು ನೋಡಿದಾಗ, ನೂರಾರು ಸಂಖ್ಯೆಯಲ್ಲಿ ಚಿನ್ನದಂತೆ ಹೊಳೆಯುತ್ತಿದ್ದ ಹೆಸರುಕಾಳು ಗಾತ್ರದ ಗೂಡುಗಳನ್ನು ಕಂಡೆ. ಅವುಗಳ ಸಮೀಪದಲ್ಲಿ ಹತ್ತಾರು ಪತಂಗಗಳನ್ನು ಕಂಡೆ. ಆ ಹತ್ತಿಯಂತಿದ್ದ ರಾಶಿಯಲ್ಲಿ ಪತಂಗಗಳ ಮೊಟ್ಟೆ ಹುದುಗಿಹೋಗಿದ್ದವು. ಅವು ಪತಂಗಗಳ ವರ್ಗದಲ್ಲಿ ಮುಖ್ಯ ವಿಭಾಗವಾದ-ಎರೆಬಿಡೆ ಕುಟುಂಬದ, ಲೈಮಂಟ್ರಿಡೆ- ಉಪ ಕುಟುಂಬದ 'ಲೈಮಂಟ್ರಿಯಾ ಮಥುರಾ' ಎನ್ನುವ ಹೆಸರಿನವು. ಪತಂಗದ ಈ ಉಪಕುಟುಂಬ ವರ್ಗಕ್ಕೆ ವಿಶೇಷ ಸ್ಥಾನವಿದೆ. ಕಾಡುಗಳಲ್ಲಿ ಹಣ್ಣುಬಿಡುವ, ಮುರುಗಲು ಮರದಂತಹ ಮರಗಳನ್ನು ಅವಲಂಬಿಸಿರುವ ಈ ಪತಂಗಗಳು, ಆ ಮರಗಳು ಕಾಣೆಯಾದರೆ ಈ ಪತಂಗ ಜೀವಿಗಳು ಕೂಡಾ ಅಲ್ಲಿಂದ ಅದೃಶ್ಯವಾಗುತ್ತವೆ. ಇದರಿಂದ ಏನು ತೊಂದರೆ? ಎನ್ನುವಂತಿಲ್ಲ. ಇದೊಂದು ಬೀಜ-ವೃಕ್ಷದ ನ್ಯಾಯವಿದ್ದಂತೆ. ಇಲ್ಲಿ ಮರ ಅವಲಂಬಿಸಿ ಕೀಟವಿದೆಯೋ? ಅಥವಾ ಕೀಟವನ್ನು ಅವಲಂಬಿಸಿ ಮರವಿದೆಯೊ? ಬಲ್ಲವರಾರು. ಇದೇ ಪ್ರಕೃತಿಯ ಜೀವಿ-ಪರಿಸರ ಸಂಕೀರ್ಣ ವ್ಯವಸ್ಥೆ. ಇಲ್ಲಿ ನಮ್ಮ ದೃಷ್ಟಿಗೆ ಮರ-ಪತಂಗ ಮಾತ್ರ ಕಂಡರೂ, ವಾಸ್ತವದಲ್ಲಿ ಹಾಗಿಲ್ಲ. ಇಲ್ಲಿ ಮರ ಬೆಳೆಯಲು ಕಾರಣವಾದದ್ದು ಒಂದು ಮುರುಗಲು ಬೀಜ. ಆ ಬೀಜ ಇಲ್ಲಿಗೆ ಬಂದು ಬಿದ್ದದ್ದು ಯಾವುದೋ ಹಕ್ಕಿ, ಯಾವುದೋ ಪ್ರದೇಶದಲ್ಲಿ






ಬೆಳೆದು ನಿಂತ, ಚೆನ್ನಾಗಿ ಹಣ್ಣು ಬಿಟ್ಟ ಮರದಲ್ಲಿ ಬೀಜದ ಸಮೇತ ಹಣ್ಣನ್ನು ನುಂಗಿ, ಇಲ್ಲಿಗೆ ಬಂದು ಯಾವುದೋ ಗಿಡದ ಮೇಲೆ ಕುಳಿತು ಹಿಕ್ಕೆ ಹಾಕಿದ ಸಮಯಕ್ಕೆ ಸರಿಯಾಗಿ, ಬಿರುಮಳೆಯಾಗಿ ಆ ಬೀಜದ ಮೇಲೆ ನೀರಿನ ಸಮೇತ ಹರಿದು ಬಂದ ಗೋಡು ಮಣ್ಣು ಕುಳಿತು, ಮಣ್ಣು ಒಣಗುವುದಕ್ಕೂ, ಬೀಜ ಮೊಳೆತು ಸಸಿಯಾಗುವುದಕ್ಕೂ ನಿರಂತರ ಸಾವಯವ ಸಂಬಂಧವಿದೆ. ಇವಿಷ್ಟು ಸಂಕೀರ್ಣಗಳ ನಡುವೆ ಲೈಮಂಟ್ರಿಯಾ ಪತಂಗ ತನ್ನ ಜೀವಾಶ್ರಯಕ್ಕೆ ಈ ಮುರುಗಲು ಮರವನ್ನು ಆಸರೆಯಾಗಿ ಪಡೆದಿದೆ. ಇದರ ನಂತರ ಮೊಟ್ಟೆಗಳು ಒಡೆದು ಹೊರಬರುವ ಸಮಯಕ್ಕೆ ಸರಿಯಾಗಿ ಮುರುಗಲು ಮರ, ತನ್ನ ಹಳೆಯ ಎಲೆಗಳನ್ನು ಕಳಚಿಕೊಂಡು ಹೊಸ ಎಲೆಗಳನ್ನು ತನ್ನ ಮುಡಿಗೇರಿಸಿಕೊಳ್ಳುವುದಕ್ಕೆ ಸರಿಯಾಗಿ ಲಾರ್ವ ಹುಳುಗಳು ತಮ್ಮ ಆಹಾರವಾಗಿ ಎಳೆಎಲೆಯನ್ನು ತಿನ್ನತೊಡಗುತ್ತವೆ. ಮೊಟ್ಟೆ ಇಟ್ಟ ನಂತರ ಪತಂಗಗಳು ಹಕ್ಕಿಗೋ, ಕಪ್ಪೆಗೋ, ಜೇಡಕ್ಕೋ, ಇರುವೆ, ಹಾವು, ಹಲ್ಲಿಗಳಿಗೋ ಆಹಾರವಾಗಿ ತಮ್ಮ ಜೀವಿತವನ್ನು ಮುಗಿಸಿದರೆ, ಆ ಜೀವಜಾಲದ ಕೊಂಡಿಯನ್ನು ಮುರುಗಲು ಮರ ಹಾಗು ಉಳಿದ ಲೈಮಂಟ್ರಿಯಾ ಪತಂಗದ ಲಾರ್ವಾ ಹುಳುಗಳು ಮುಂದುವರೆಸುತ್ತವೆ.

ಅವತ್ತೊಂದು ದಿನ ಕೆಲಸದ ನಿಮಿತ್ತ ನನ್ನದೇ ಪುಟ್ಟ ವಾಹನವನ್ನೇರಿ ಕಣಿವೆಯೊಂದರ ತಿರುವಿನಲ್ಲಿ ಹೊರಟಿದ್ದೆ. ಬೆಳಗಿನ ಹತ್ತು-ಹನ್ನೊಂದರ ಸಮಯ. ನನ್ನ ವಾಹನದ ಹಿಂದೆ-ಮುಂದೆ ಹತ್ತಾರು ವಾಹನಗಳ ಸಾಲು. ಒಂದು ನೂಲು ಎಚ್ಚರ ತಪ್ಪಿದರೆ ನಾನು ನನ್ನ ಗಾಡಿ ಸಮೇತ ಕಣಿವೆಗೆ. ಹಿಂದಿನಿಂದ ಸಿಮೆಂಟ್ ತುಂಬಿದ್ದ ಲಾರಿ ಚಾಲಕನದು ಇನ್ನಿಲ್ಲದ ಅವಸರ. ನಾನು ತುಸು ಎಡಕ್ಕೆ ನನ್ನ ಗಾಡಿಯನ್ನು ಚಾಲಿಸಿಕೊಂಡು, ಆ ಲಾರಿ ಚಾಲಕನಿಗೆ ಮುಂದೆ ಹೋಗಲು ಅನುವು ಮಾಡಿಕೊಟ್ಟೆ. ಅರೆಕ್ಷಣ ನನ್ನ ಗಮನ ಬೇಲಿ ಬದುವಿನ ಲಂಟಾನ ಪೊದೆಗೆ ಹರಿಯಿತು. ನಾಲ್ಕೈದು ಅಡಿ ಎತ್ತರವಿದ್ದ ಆ ಗಿಡದ ತುದಿಯು ಒಂದೆರಡು ದಿನದ ಹಿಂದೆ ಅರಳಿನಿಂತ ಹೂ ಗೊಂಚಲಿನಿಂದ ತುಂಬಿತ್ತು. ಇದ್ದಕ್ಕಿದ್ದಂತೆ ಆ ಹೂಗೊಂಚಲ ಮೇಲ್ಭಾಗ ಗಾಳಿಗೆ ತುಸು ಹೊಯ್ದಾಡಿದಂತಾಯ್ತು. ಒಂದೆರಡು ಇಂಚಿನ ಅಳತೆಯ ಕೀಟವು ತನ್ನ ಮಾರುದ್ದದ ಕೊಳವೆಯಂತ ಬಾಯಿಯಿಂದ ಲಂಟಾನ ಹೂವಿನ ಮಕರಂದ ಹೀರುತ್ತಿರುವಂತೆ ಕಂಡಿತು. ನಾನು ನನ್ನ ಕೆಲಸದ ಅವಸರದಲ್ಲಿ ಅದನ್ನು ಪೂರ ಗಮನಿಸದೆ ಮುಂದೆ ಸಾಗಿದೆ. ಲಂಟಾನ ಪೊದೆಯನ್ನೂ, ಗಮನಿಸಿದ ಸಮಯ ಹಾಗು ಆ ಸ್ಥಳವನ್ನೂ



ನೆನಪಿನಲ್ಲಿ ಇಟ್ಟುಕೊಂಡೆ. ನಂತರ ಒಂದೆರಡು ದಿನಗಳಲ್ಲಿ ನಾನದನ್ನು ಗಮನಿಸಿದಾಗ ಆ ಕೀಟ, ಪತಂಗ ವರ್ಗದ ಬಹು ಮುಖ್ಯ ಕವಲಾದ ಸಾಮಾನ್ಯವಾಗಿ ಇಂಗ್ಲಿಷ್ ನಲ್ಲಿ 'ಹಾಕ್ ಮಾಥ್' ಎಂದು ಕರೆಯುವ ಪತಂಗವಾಗಿತ್ತು. ಈ ಪತಂಗ ವರ್ಗದಲ್ಲಿ ಜಗತ್ತಿನಾದ್ಯಂತ 1450 ತಳಿಗಳಿದ್ದು, ಇವುಗಳನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ. ಈ ವರ್ಗದ ಎಲ್ಲಾ ಕುಟುಂಬಗಳನ್ನು ಸೇರಿಸಿ-ಸ್ಪಿಂಗಿಡೆ ಎಂದು ಹೆಸರಿಡಲಾಗಿದೆ. ಭಾರತದಲ್ಲಿ ಈ ವರ್ಗಕ್ಕೆ ಸೇರಿದ 58 ಕುಟುಂಬಗಳನ್ನು ಈವರೆಗೆ ಗುರುತಿಸಲಾಗಿದೆ. ಸಾಮಾನ್ಯವಾಗಿ ಪತಂಗಗಳು ತಮ್ಮ ಕೋಶಾವಸ್ಥೆಯಿಂದ ಹೊರಬಂದ ನಂತರ, ಮಕರಂದ ಇನ್ನಿತರೆ ಆಹಾರವನ್ನು ಸೇವಿಸುತ್ತವೆಯಾದರು ಈ ಸ್ಪಿಂಗಿಡೆ ಕುಟುಂಬದ- ಸೆಫನೋಡೆಸ್ ಹೈಲಾಸ್ ಮತ್ತು ಅಚೆರೊಂಟಿಯಾ ಲಾಚೆನ್ಸಿಸ್ ಪತಂಗ ತಮ್ಮ ಇಡೀ ದೇಹಕ್ಕಿಂತಲೂ ಉದ್ದದ ಹೀರು ಕೊಳವೆಯಂತ ಬಾಯಿಂದ ಲಂಟಾನ ಹೂಗಳ ಮಕರಂದ ಹೀರುತ್ತವೆ. ನಾಗರ ಹೊಳೆ, ಮಲೆಮಾದೇಶ್ವರ ಬೆಟ್ಟ, ಪಶ್ಚಿಮ ಘಟ್ಟದಂತ ಕಾಡುಗಳಲ್ಲದೆ, ಇನ್ನಿತರೆ ಅರೆಮಲೆನಾಡಿನ ಕಾಡುಗಳಲ್ಲಿ ಇತ್ತೀಚಿನ ದಿನಗಳಲ್ಲಿ ಲಂಟಾನ ಕಳೆಸಸ್ಯ ವೇಗವಾಗಿ ಹಬ್ಬುತ್ತಿರುವುದು ಈ ಕೀಟಗಳಿಗೆ ಮುಖ್ಯ ಆಹಾರಮೂಲವಾಗಿದೆ.

ನಮ್ಮ ಸುತ್ತಮುತ್ತಲೂ, ಎಲ್ಲಾ ವಾತಾವರಣದಲ್ಲಿಯೂ ಕಾಣಸಿಗುವ ಈ ಪತಂಗಗಳು, ಅವುಗಳ ಬಣ್ಣದಿಂದ, ವಿನ್ಯಾಸದಿಂದ ಪರಿಸರ ಪ್ರೇಮಿಗಳ ಮನಸೆಳೆಯುತ್ತವೆ. ನಾನೂ ಸಹ ಇದಕ್ಕೆ ಹೊರತಲ್ಲ. ನನ್ನ ಪತಂಗ ಪಯಣದ ಕೆಲವು ಘಟನೆಗಳನ್ನು ಇಲ್ಲಿ ತಿಳಿಸಿದ್ದೇನೆ ಅಷ್ಟೆ. ಈ ಪತಂಗ ಪಯಣವು ನನಗೆ ಪರಿಸರದ ಬಗ್ಗೆ ಒಂದು ವಿಶೇಷ ದೃಷ್ಟಿಕೋನವನ್ನು ಕಲ್ಪಿಸಿಕೊಟ್ಟಿದೆ ಎಂದರೆ ತಪ್ಪಾಗಲಾರದು.


© ನಾಗೇಶ್ ಓ. ಎಸ್.

**ಲೇಖನ :** ನಾಗಭೂಷಣ ಜ್ಯೋತಿ
ದಾವಣಗೆರೆ ಜಿಲ್ಲೆ




# ಹದಿನಾರು ಕೆರೆಯ ಹತ್ತಾರು ಹಕ್ಕಿಗಳು

ನಂಜನಗೂಡು ತಾಲೂಕಿನ ಹದಿನಾರು ಕೆರೆಗೆ ಪಟ್ಟೆ ತಲೆಯ ಹೆಬ್ಬಾತುಗಳು (Bar-headed goose) ಚಳಿಗಾಲದಲ್ಲಿ ಬರುತ್ತವೆ. ಇವು ಮೂಲತಃ ಮಧ್ಯ ಏಷ್ಯಾದ ಪಕ್ಷಿಗಳು. ಚಳಿಗಾಲದಲ್ಲಿ ದಕ್ಷಿಣ ಭಾರತದೆಡೆಗೆ ವಲಸೆ ಬರುತ್ತವೆ. ಎರಡು ವರ್ಷಗಳ ಹಿಂದೆ ಅವುಗಳ ಛಾಯಾಚಿತ್ರವನ್ನು ತೆಗೆದಿದ್ದೆ. ಇನ್ನೊಮ್ಮೆ ಅದನ್ನು ನೋಡುವ ಹುರುಪಿನಿಂದ ಭಾನುವಾರ ನಾನು ಹಾಗು ನನ್ನ ಸಹಭಾಗಿ ಫೋಟೋಗ್ರಾಫರ್ ಬೆಳಗ್ಗೆ 6.15ಕ್ಕೆ ಮೈಸೂರಿನಿಂದ ಹೊರಟೆವು. ನಾವು ತಲುಪುವಷ್ಟರಲ್ಲೇ ಕೆರೆಯ ಏರಿ ಮೇಲೆ ಹಲವಾರು ಮಂದಿ ಕ್ಯಾಮೇರಾ-ದುರ್ಬೀನುಗಳೊಂದಿಗೆ ಪಕ್ಷಿ ವೀಕ್ಷಣೆಯನ್ನು ಆರಂಭಿಸಿದ್ದರು. ನನ್ನ ತಲೆಯಲ್ಲಿ ಎರಡು ವರ್ಷಗಳ ಹಿಂದೆ ಭೇಟಿಯಾಗಿದ್ದ ಪಟ್ಟೆ ತಲೆ ಹೆಬ್ಬಾತು ಹಾರುತ್ತಿತ್ತು.

ಕೆರೆಯ ಮೇಲೊಂದು ಪಾಚಿ ಬಣ್ಣದ ಹಕ್ಕಿ ಹಾರಿತು. ಕ್ಯಾಮೇರಾವನ್ನು ಅತ್ತ ತಿರುಗಿಸಿ ಕ್ಲಿಕ್ಕಿಸಿದೆವು. ಅದೊಂದು ಕೊಳದ ಬಕ (Striated pond heron), ಕೆರೆಯ ದಡದಲ್ಲಿದ್ದ ಪೊದೆಯೊಂದರ ನೆರಳಿನಲ್ಲಿ ಕುಳಿತಿತ್ತು. ಅದು ಹಾರಿಹೋಗಿ ಕುಳಿತದ್ದನ್ನು ನಾವು ನೋಡದಿದ್ದರೆ ಬಹುಶಃ ನಮಗೆ ತಿಳಿಯುತ್ತಲೇ ಇರಲಿಲ್ಲವೇನೊ! ಬಕಗಳು ಕೆರೆದಡಗಳಲ್ಲಿ ಹೊಂಚುಹಾಕಿ ಕಪ್ಪೆ, ಮೀನುಗಳನ್ನು, ನೀರಿನಲ್ಲಿರುವ ಹುಳ-ಹುಪ್ಪಟೆಗಳನ್ನು ತಿಂದು ಬದುಕುತ್ತವೆ. ಕೆಲವು ಬಾರಿ ಮೀನುಗಳನ್ನು ಹಿಡಿಯಲು ಇವು ಪುಕ್ಕವನ್ನೋ ಅಥವಾ

ಎಲೆಯನ್ನೋ ನೀರಿನ ಮೇಲೆ ಹಾಕಿ, ಅದೇನೆಂದು ನೋಡಲು ಬರುವ ಮೀನುಗಳನ್ನು ಕಬಳಿಸಿಬಿಡುತ್ತವೆ.

ಬಕವೆಂದರೆ ನನ್ನ ತಲೆಯಲ್ಲಿ ಬರುವುದು ಪಂಚತಂತ್ರ ಕತೆಯಲ್ಲಿನ ವಂಚಕ ಬಕದ ಕತೆ. ಆ ಪಂಚತಂತ್ರ ಕತೆ ಹೀಗೆ ಸಾಗುತ್ತದೆ. ಒಂದು ಕೆರೆಯಲ್ಲಿ ಬಕಪಕ್ಷಿ ವಾಸಿಸುತ್ತಿತ್ತು. ಅದು ಒಮ್ಮೆ ಸುಲಭವಾಗಿ ಬೇಟೆಯಾಡಲು ಒಂದು ರಣತಂತ್ರವನ್ನು ಹೂಡಿತು. ಅದೇನೆಂದರೆ ಯಾರು ಹತ್ತಿರ ಬಂದರೂ ಲೆಕ್ಕಿಸದೆ ಗಾಢಾಲೋಚನೆಯಲ್ಲಿ ಮುಳುಗಿರುವ ಹಾಗೆ ನಟಿಸುವುದು. ಹೀಗೆ ನಟಿಸುತ್ತಿದ್ದ ಬಕವನ್ನು ಕಂಡು ಆ ಕೆರೆಯ ಮೀನುಗಳು ಬಕಕ್ಕೇನೊ ಆಗಿದೆ ಎಂದು ಆರೋಗ್ಯ ವಿಚಾರಿಸಲು ಬಂದವು. ವಿಚಾರಿಸಲು ಬಂದ ಮೀನುಗಳಿಗೆ ಆ ಬಕ




ಪಕ್ಷಿಯು, ನಾನು ಒಬ್ಬ ಜ್ಯೋತಿಷ್ಯ ಈ ಕೆರೆ ಸ್ವಲ್ಪದಿನಗಳಲ್ಲೇ ಬತ್ತಿಹೋಗುತ್ತದೆ ಎಂದು ಹೇಳುವುದನ್ನು ಕೇಳಿಸಿಕೊಂಡೆನೆಂದೂ, ಅಂದಿನಿಂದ ನನಗೆ ನಿಮ್ಮೆಲ್ಲರದ್ದೇ ಚಿಂತೆಯಾಗಿದೆ, ನಾನೇನೊ ಇನ್ನೊಂದು ಕೆರೆ ನೋಡಿಕೊಳ್ಳುವೆ, ಆದರೆ ನಿಮ್ಮ ಗತಿ ಏನಾಗುವುದೋ ಎಂದು ಬೇಸರವಾಗುತ್ತಿದೆ ಎಂದು ಹೇಳಿತು. ಎಲ್ಲ ಮೀನುಗಳು ಬಕದ ಮಾತು ಕೇಳಿ ಗಾಬರಿಯಾದವು ಹಾಗೂ ತಮ್ಮ ತಮ್ಮಲ್ಲೆ ಚರ್ಚಿಸಿಕೊಂಡು ಈ ಸಂಕಷ್ಟಕ್ಕೆ ಬಕವನ್ನೇ ಪರಿಹಾರ ಸೂಚಿಸುವಂತೆ ಕೇಳಿದವು. ಬಕವು, ಹತ್ತಿರದಲ್ಲೇ ಇನ್ನೊಂದು ದೊಡ್ಡ ಕೆರೆಯಿದೆ, ಅದು ಎಂಥಾ ಬರಗಾಲ ಬಂದರೂ ಬತ್ತುವುದಿಲ್ಲ, ನೀವು ಇಚ್ಛಿಸಿದರೆ ದಿನಕ್ಕೊಬ್ಬರನ್ನು ಆ ಕೆರೆಗೆ ಹೊತ್ತುಕೊಂಡು ಹಾರಿ ಸಾಗಿಸುವೆ ಎಂದಿತು. ಎಲ್ಲಾ ಮೀನುಗಳು ನಮ್ಮ ಜೀವ ಉಳಿಯುತ್ತದೆ ಎಂದು ಸಂತೋಷಗೊಂಡು, ನಾ ಮುಂದು ತಾ ಮುಂದು ಎಂದು ಬಕದೊಂದಿಗೆ ಹೊರಡಲು ತಯಾರಾದವು. ದಿನವೂ ಬಕ ಮೀನನ್ನು ಹೊತ್ತುಕೊಂಡು ಹೋಗಿ, ದೂರದಲ್ಲಿದ್ದ ಬಂಡೆಯ ಮೇಲೆ ಕುಳಿತು ದಿನಕ್ಕೆ ಒಂದೊಂದಂತೆ ತಿನ್ನತೊಡಗಿತು. ಒಂದು ಏಡಿಗೆ ಈ ಬಕದ ಬಗ್ಗೆ ಸಂಶಯವಿತ್ತು ಹಾಗೂ ಒಂದು ದಿನ ಬಕ ಬಂದಾಗ ಇಂದು ನಿನ್ನೊಂದಿಗೆ ನಾನು ಬರುವೆನು ನನ್ನನ್ನು ಹೊಸ ಕೆರೆಗೆ ಕರೆದುಕೊಂಡು ಹೋಗು ಎಂದು

ವಿನಂತಿಸಿತು. ಪ್ರತೀ ದಿನ ಮೀನನ್ನೇ ತಿಂದು ಬೇಸರಗೊಂಡಿದ್ದ ಬಕವು, ಇವತ್ತು ಹೊಸ ರುಚಿಯ ಊಟ ಸಿಗುತ್ತದೆ ಎಂದು ಸಂತೋಷದಿಂದ ಏಡಿಯ ಮಾತಿಗೆ ಒಪ್ಪಿ, ಏಡಿಯನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ಬಂಡೆಯತ್ತ ಹಾರಿತು. ಏಡಿ ಕೆರೆ ಎಲ್ಲೆಂದು ಕೇಳಿದಾಗ ಆ ದೊಡ್ಡ ಬಂಡೆಯ ಹಿಂದಿದೆ ಎಂದು ನಕ್ಕಿತು. ಬಂಡೆಯ ಮೇಲಿರುವ ಮೀನಿನ ಮೂಳೆಗಳನ್ನು ಕಂಡ ಏಡಿಗೆ ಬಕದ ಕಪಟ ತಿಳಿಯಿತು. ಮೆಲ್ಲಗೆ ಅದರ ಕೊಕ್ಕಿನಿಂದ ನುಣುಚಿಕೊಂಡು ಬಕದ ಕತ್ತನ್ನು ತನ್ನ ಮೊನಚು ಕೈಗಳಿಂದ ಬಿಗಿಯಾಗಿ ಹಿಡಿದು ಬಕವನ್ನು ಕೊಂದಿತು. ಕೆರೆಗೆ ಹಿಂತಿರುಗಿ ಎಲ್ಲ ಮೀನುಗಳಿಗೆ ವಿಷಯ ತಿಳಿಸಿತು. ಇದು ಪಂಚತಂತ್ರದಲ್ಲಿ ಶತ್ರುಗಳನ್ನು ನಂಬಬಾರದು ಎಂಬ ನೀತಿಯನ್ನು ತಿಳಿಸಲು ಬರೆದಿರುವ ಕಥೆ.

ಬಕ ಜಪಿಸಿ ಹಿಡಿಯುವುದನ್ನು ನೋಡಿ ಅದನ್ನು ಸಾಹಿತ್ಯ ಪ್ರಾಕಾರಗಳಲ್ಲಿ ಹೋಲಿಸಿ ಬಕಧ್ಯಾನ ಎಂಬ ಉಪಮೆಯೂ ಬಳಕೆಯಲ್ಲಿದೆ. ನಾವು ನೋಡುತ್ತಿದ್ದ ಬಕವು ಬೆಳಗಿನ ಆಹಾರ ಸೇವನೆ ಮುಗಿಸಿತ್ತೋ ಅಥವಾ ತನ್ನ ಧ್ಯಾನ ಆರಂಭಿಸಿತ್ತೋ ತಿಳಿಯದು. ನಮ್ಮ ಕಣ್ಣಿಗೆ ಅದು ಒಂದೇ ಸ್ಥಳದಲ್ಲಿ ವಿಶ್ರಮಿಸುತ್ತಿರುವಂತೆ ಕಂಡಿತು.


© ಡಾ.ದೀಪಕ್ ಭ

ಬಕವಲ್ಲದೆ ನಾಮಗೋಳಿಗಳು, ಹೆಜ್ಜಾರ್ಲೆ (ಪೆಲಿಕನ್)ಗಳು ಹೇರಳವಾಗಿ ಸುತ್ತಾಮುತ್ತಾ ವಿಹರಿಸುತ್ತಿದ್ದವು. ನಾನು ಮರದ ನೆರಳಿನಲ್ಲಿ ನಿಂತಿದ್ದೆ. ತಲೆ ಎತ್ತಿದರೆ ಅಲ್ಲೊಂದು ಗರುಡವು (ಬ್ರಾಹ್ಮಿನಿ ಕೈಟ್) ಕುಳಿತಿತ್ತು. ಅದನ್ನು ಹತ್ತಿರದಿಂದ ಚಿತ್ರಿಸುವುದಕ್ಕೆ ತುಂಬಾ ಸಂತೋಷವಾಯಿತು. ಈಗ ಗರುಡಗಳು ಹಾಗೂ ಹದ್ದುಗಳು ಹೆಚ್ಚು ಕೆರೆ ನದಿಗಳ ಸಮೀಪದಲ್ಲಿ ನೋಡಲು ಸಿಗುತ್ತವೆ. ನಾನು ಸಣ್ಣವನಿದ್ದಾಗ ಇವು ಎಲ್ಲೆಲ್ಲೂ ನೋಡಲು ಸಿಗುತ್ತಿದ್ದವು. ಕೋಳಿಮರಿಗಳನ್ನು ಹದ್ದಿನ ಕಣ್ಣಿನಿಂದ ರಕ್ಷಿಸಲು ಹೆಣಗಾಡುವವರನ್ನು ನೋಡಿದ್ದೆ. ಈಗ ಹದ್ದುಗಳು ಕೊಳಚೆಪ್ರದೇಶ, ಕೆರೆನದಿಗಳಿಗೆ ಸೀಮಿತವಾಗಿವೆ ಎನಿಸುತ್ತಿದೆ ನನಗೆ. ಇವು ಸತ್ತ ಪ್ರಾಣಿಗಳನ್ನು ತಿಂದು ಬದುಕುತ್ತವೆ. ಎತ್ತರದಲ್ಲಿ ಗೂಡುಗಳನ್ನು ಕಟ್ಟಿ ಮೊಟ್ಟೆ ಇಡುತ್ತವೆ. ಕೆಲವು ಬಾರಿ ನೆಲದ ಮೇಲೂ ಗೂಡು ಕಟ್ಟುತ್ತವೆ.


© ಡಾ.ದೀಪಕ್ ಭ

ದಂಡೆಯಲ್ಲಿ ಒಂದು ಸಣ್ಣ ಗದ್ದೆ ಗೊರವ (ಸ್ಯಾಂಡ್ ಪೈಪರ್) ಆಹಾರ ಹುಡುಕುತ್ತಿತ್ತು. ಗದ್ದೆ ಗೊರವ ಪಕ್ಷಿಯು ದಡದ ಹಕ್ಕಿಗಳು (ವೇಡರ್ಸ್) ಕುಟುಂಬಕ್ಕೆ ಸೇರುತ್ತವೆ. ಈ ಪಕ್ಷಿ ತನ್ನ ಉದ್ದ ಕೊಕ್ಕಿನಿಂದ ಮಣ್ಣು, ಮರಳಿನಲ್ಲಿರುವ ಹುಳ-ಹುಪ್ಪಟೆಗಳನ್ನು ಹೆಕ್ಕಿ ತಿನ್ನುತ್ತವೆ. ಈ ಪ್ರಭೇದದ ಪಕ್ಷಿಗಳ ಕೊಕ್ಕಿನ ಉದ್ದ ಬೇರೆ ಬೇರೆಯಾಗಿದ್ದು, ಆಹಾರಕ್ಕೆ ಸ್ಪರ್ಧೆ ಏರ್ಪಡುವುದನ್ನು ತಗ್ಗಿಸುತ್ತದೆ. ಈ ಕುಟುಂಬದ ಹಕ್ಕಿಗಳ ಕೊಕ್ಕು

ತುಂಬಾ ಸೂಕ್ಷ್ಮವಾಗಿರುತ್ತವೆ. ಇವು ನೆಲದ ಮೇಲೆ ಗೂಡು ಕಟ್ಟಿ 3 ರಿಂದ 4 ಮೊಟ್ಟೆಗಳನ್ನು ಇಡುತ್ತವೆ.




ಗದ್ದೆ ಗೊರವವನ್ನು ನಾನು ಕ್ಯಾಮೇರಾದಲ್ಲಿ ಸೆರೆ ಹಿಡಿಯುತ್ತಿದ್ದೆ, ಅಷ್ಟರಲ್ಲಿ ಇಬ್ಬರು ಹಳ್ಳಿ ಹೆಂಗಸರು ಬಟ್ಟೆಗಳನ್ನು ತಂದು ಒಗೆಯಲಾರಂಭಿಸಿದರು. ಇವರ ಈ ಕಾರ್ಯದಿಂದ ನೀರು ಕಲುಷಿತವಾಗುವುದು, ಹಕ್ಕಿಗಳು ಹಾರಿಹೋಗುವವು, ಮುಂತಾದ ಯೋಚನೆಗಳು ತಲೆಯಲ್ಲಿ ಸುಳಿದವು. ನಾವು ಇಲ್ಲೇ ಇದ್ದರೆ ಪಕ್ಷಿವೀಕ್ಷಣೆಗೆ ಬಂಗವಾಗುತ್ತದೆ ಎಂದೆಣಿಸಿ, ಕೆರೆ ದಂಡೆಯ ಕಡೆ ನಡೆದು ಹೋದೆವು.




ಒಂದು ಗಿಳಿ, ಹಳದಿ ಸಿಪಿಲೆ (Yellow wagtail), ಉಲಿಯಕ್ಕಿ (Plain prinia) ಗಳು ಕಂಡವು. ಗಿಳಿಯನ್ನು ಒಂದು ಮುದ್ದಿನ ಪಕ್ಷಿ ಎಂದು ಸಣ್ಣವನಿದ್ದಾಗ ಕಲಿತ ಪದ್ಯದಿಂದ ಅರಿತಿದ್ದೆ (ಬಾ ಬಾ ಗಿಳಿಯೇ, ಬಣ್ಣದ ಗಿಳಿಯೇ, ಹಣ್ಣನು ಕೊಡುವೆನು ಬಾ ಬಾ). ನಮ್ಮ ದೇಶದಲ್ಲಿರುವ ಗಿಳಿಗಳ ಬಗ್ಗೆ ಓದಿದಾಗ ಇವು ಗಲಾಟೆ ಮಾಡುವ ಸಸ್ಯಾಹಾರಿ ಪಕ್ಷಿಗಳೆಂದು ತಿಳಿಯಿತು. ನಮ್ಮ ದೇಶದಲ್ಲಿ ಕಾಣುವ ಗುಲಾಬಿ ಕೊರಳಿನ ಗಿಳಿಗಳು (ರೋಸ್ ರಿಂಗ್ಡ್ ಪ್ಯಾರಾಕೀಟ್), ಗಿಳಿ ಕುಟುಂಬದಲ್ಲೇ ಮಾನವನ ಗಲಾಟೆಗಳಿಗೆ ಒಗ್ಗಿ ವೃದ್ಧಿಯಾಗಿರುವ ಪಕ್ಷಿಗಳು. ಎಲ್ಲವನ್ನೂ ಕ್ಲಿಕ್ಕಿಸಿಕೊಂಡು ನೀರಿನತ್ತ ತಿರುಗಿದಾಗ ಮೀಸೆ ರೀವ (ವಿಸ್ಕರ್ಡ್ ಟರ್ನ್) ನೀರಿನತ್ತ ಧುಮುಕಿತು. ನನ್ನ ಲೆನ್ಸಿಗೆ ಸ್ವಲ್ಪ ದೂರವಿದ್ದದ್ದನ್ನು ಕ್ಲಿಕ್ಕಿಸಿದೆ. ಅದರ

ಬಾಯಲ್ಲೊಂದು ಮೀನು! ಅಷ್ಟರಲ್ಲಿ ಪಟ್ಟೆತಲೆ ಹೆಬ್ಬಾತು (ಬಾರ್ ಹೆಡೆಡ್ ಗೂಸ್)ನ ಪರಿಚಿತ ದನಿ ಕೇಳಿಸಿತು.







ನೀರಿಗಿಳಿಯುವಾಗ ಆಧಾರ ತಪ್ಪಿ ಬೀಳುವ ರೀತಿಯಲ್ಲಿ ಕೆಲವು ಪಟ್ಟೆತಲೆ ಹೆಬ್ಬಾತುಗಳು ನೀರಿಗೆ ಬಿದ್ದರೆ, ಇನ್ನೂ ಕೆಲವು ಸರಾಗವಾಗಿ ನೀರಿನ ಮೇಲಿಳಿದವು. ಒಂದಿಷ್ಟು ಕ್ಲಿಕ್ಕಿಸಿ ಎಣಿಸಿದಾಗ 13 ಹಕ್ಕಿಗಳಿದ್ದವು. ಮತ್ತೊಂದು ಗುಂಪು ಬರುತ್ತಿರುವ ಸದ್ದಾಯಿತು ಓ... ಎಂದು ಹರ್ಷೋದ್ಗಾರ ಮಾಡುವಾಗ ಎದುರುಗಡೆ ದಡದಲ್ಲಿ ಒಂದು ಕಪ್ಪು ಮೋಡ ಕವಿದಂತಾಯಿತು. ಮರುಕ್ಷಣವೇ ಅದು ಬಿಳಿ ಮೋಡದಂತಾಯಿತು. ಅವೆಲ್ಲವೂ ಹಾರುತ್ತಿದ್ದ ಪಟ್ಟೆತಲೆ ಹೆಬ್ಬಾತುಗಳು. ಇವು ಮಧ್ಯ ಏಷ್ಯಾ ಪ್ರದೇಶದ ಹಕ್ಕಿಯಾಗಿದ್ದು, ಚಳಿಗಾಲದಲ್ಲಿ ಆಶ್ರಯಕ್ಕೆ ನಮ್ಮ ಮೈಸೂರಿಗೆ ಬರುತ್ತವೆ ಎಂಬುದು ನನಗೆ ಪ್ರಾಂತೀಯ ಒಣಜಂಭವನ್ನು ಸ್ವಲ್ಪಕಾಲ ಉಂಟುಮಾಡಿತು. ಅಸಂಖ್ಯಾತ ಪಟ್ಟೆತಲೆ ಹೆಬ್ಬಾತುಗಳ ನಡುವೆ ಗುಲಾಬಿ ಮೂತಿಯ ಬೂದು ಹೆಬ್ಬಾತು (ಗ್ರೆ ಲಾಗ್ ಗೂಸ್) ಕಂಡಿತು. ಹಿಂದಿನ ಕಾಲದಲ್ಲಿ ಮಾನವ ಪ್ರಾಣಿಸಾಕಣೆ ಶುರುಮಾಡಿದಾಗ, ಬೂದು ಹೆಬ್ಬಾತುಗಳನ್ನು ಮೊದಲು ಸಾಕಿದ ಎಂದು ಅಂತರ್ಜಾಲದಲ್ಲಿದೆ. ಈ ಪಟ್ಟೆತಲೆ ಹೆಬ್ಬಾತುಗಳನ್ನೇ ಪ್ರಾಚೀನ ಭಾರತದಲ್ಲಿ ಹಂಸವೆಂದು ನಂತರದಲ್ಲಿ ಕದಂಬವೆಂದು ಕರೆಯುತ್ತಿದ್ದರು. ಹೆಬ್ಬಾತುಗಳು ನಳ ದಮಯಂತಿಯರ ಕತೆಯನ್ನು ಜ್ಞಾಪಿಸುತ್ತದೆ. ಹಂಸಗಳೇ ನಳ ಮಹಾರಾಜನಿಗೆ ದಮಯಂತಿಯ ಸೌಂದರ್ಯವನ್ನು, ದಮಯಂತಿಗೆ ನಳಮಹಾರಾಜನ ಶೌರ್ಯದ ಬಗ್ಗೆ ತಿಳಿಸಿದವು ಎಂಬ ವದಂತಿಯಿದೆ. ಅಲ್ಲಿ ಬರೆದಿರುವ ಹಂಸಪಕ್ಷಿ ಇದೋ, ಅಲ್ಲವೋ? ತಿಳಿಯದು (ಸ್ವರ್ಣ

ಹಂಸಪಕ್ಷಿಗಳು ಎಂದಿದೆ ಕತೆಯಲ್ಲಿ) ಬಹುಶಃ ಹೆಬ್ಬಾತು ಪ್ರಭೇದದ ಪಕ್ಷಿಗಳ ಪ್ರಾಚೀನತೆ ಅರಿಯಲಂತೂ ಸಹಕಾರಿಯಾಗಿದೆ.










ಇದೆಲ್ಲವನ್ನು ಯೋಚಿಸುತ್ತಿರಬೇಕಾದರೆ ನೀರು ಕಾಗೆ (ಕಾರ್ಮೊರೆಂಟ್) ಮೀನನ್ನು ಹಿಡಿದು ಗಾಳಿಯಲ್ಲಿ ತೂರಿ ಅದನ್ನು ಮತ್ತೆ ಹಿಡಿದು ನುಂಗುತ್ತಿತ್ತು. ಈ ದೃಶ್ಯ ನಮ್ಮ ಕ್ಯಾಮರಾ ಕಣ್ಣಿನಲ್ಲಿ ಸೆರೆಯಾಯಿತು. ಅಲ್ಲಿ ಸುಮಾರು 20-25 ಜನ ಕ್ಯಾಮರ ಹಿಡಿದವರಿದ್ದರೂ, ಮೀನನ್ನು ಮೇಲಕ್ಕೆ ತೂರಿದಾಗ ಕ್ಲಿಕ್ಕಿಸಿದ್ದು ನನ್ನ ಜೊತೆಯಲ್ಲಿದ್ದ ಫೋಟೋಗ್ರಾಫರ್ ಒಬ್ಬರು ಮಾತ್ರ. ನೀರು ಕಾಗೆ ಕತ್ತನ್ನು ಮಾತ್ರ ಹೊರಹಾಕಿ ನೀರಿನೊಳಗೆ ಈಜುತ್ತದೆ. ಇದರ ಪುಕ್ಕಗಳು ನೀರಿನಲ್ಲಿ ಒದ್ದೆಯಾಗುವ ಕಾರಣ ಇವು ರೆಕ್ಕೆ ಒಣಗಿಸಿಕೊಳ್ಳಲು ಬಂಡೆ, ಮರದ ಕೊರಡುಗಳ ಮೇಲೆ ರೆಕ್ಕೆ ಬಿಚ್ಚಿ ಕೂರುತ್ತವೆ. ನೋಡಲು ಚಿತ್ರಿಸಲು ತುಂಬಾ ಅಕರ್ಷಕ ಭಂಗಿಯದು. ಈ ದೃಶ್ಯವು ಮುಗಿಯುವಷ್ಟರಲ್ಲೇ ನಾನ್ಯಾರಿಗೆ ಕಮ್ಮಿ ಎಂದು ಒಂದು ಹೆಜ್ಜಾರ್ಲೆ (ಪೆಲಿಕನ್) ಹಾರಿಬಂದು ನೀರಿಗಿಳಿಯಿತು, ಉದ್ದ ಕೊಕ್ಕಿನ ಈ ಪಕ್ಷಿಗಳ ಗಂಟಲಿನಲ್ಲಿ ಒಂದು ಚೀಲವಿರುತ್ತದೆ. ನೀರಿನಲ್ಲಿ ಮೀನನ್ನು ಹಿಡಿದ ಮೇಲೆ ನೀರನ್ನು ಹೊರಹಾಕಿ ಹಿಡಿದ ಮೀನನ್ನು ತಿನ್ನುತ್ತದೆ. ನಾವು ನೀರಿನ ಪಕ್ಷಿಗಳ ಕಡೆ ಗಮನ ಹರಿಸುತ್ತಿದ್ದರೆ ನನ್ನನ್ನು ಮರೆತಿರಾ? ಎಂದು ಕಾಗೆಯು ನಮ್ಮ ಮುಂದೆಯೇ ಕೂಗಿ ಹಾರಿತು. ದೂರದಲ್ಲಿ ಒಂದು ಮಿಂಚುಳ್ಳಿಯೂ ಸಹ ಹಾರಿಹೋಯಿತು. ದೊಡ್ಡ ತಲೆ ಉದ್ದ ಕೊಕ್ಕಿನ ಮಿಂಚುಳ್ಳಿಗೆ ಸಣ್ಣ ಕಾಲುಗಳಿವೆ. ಇವು ಕ್ರಿಮಿ ಕೀಟಗಳನ್ನು ಮೀನುಗಳನ್ನು ತಿನ್ನುತ್ತವೆ.

ಗಡಿಯಾರ 11 ಗಂಟೆ ದಾಟಿತ್ತು, ಹಸಿವು ಹಾಗು ಕಾಯುತ್ತಿರುವ ಇತರೆ ಕಾಯಕಗಳನ್ನು ನೆನೆದು ಪಕ್ಷಿ ವೀಕ್ಷಣೆಗೆ ಅಲ್ಪವಿರಾಮವನ್ನಿತ್ತು ಮೈಸೂರಿಗೆ ಹಿಂತಿರುಗಿದೆವು.










**ಲೇಖನ : ಡಾ. ದೀಪಕ್ ಭ.**

**ಮೈಸೂರು ಜಿಲ್ಲೆ**




# ಕಂದು ಬೆಳವ ಅಥವಾ ಕಂದು ಕಪೋತ

ಚಿಕ್ಕ ವಯಸ್ಸಿನಲ್ಲಿ ಶಾಲೆಗೆ ರಜಾ ಇದ್ದಾಗ ಅಮ್ಮ-ಅಜ್ಜಿಯ ಜೊತೆ ಹೊಲಕ್ಕೆ ಹೋದಾಗ ಆ ಜೋಡಿ ಹಕ್ಕಿಗಳು ನನ್ನನ್ನು ತುಂಬಾ ಆಕರ್ಷಿಸುತ್ತಿದ್ದವು. ಅವು ಜೊತೆ ಕೂತು ಹಲುಬುವ ಇಂಚರನಿನಾದ ಈಗಲೂ ನನ್ನ ಕರ್ಣಗಳಲ್ಲಿ ಮಾರ್ಧನಿಸುತ್ತಿದೆ. ಅದಕ್ಕಾಗಿಯೇ ಕನಕದಾಸರು ತಮ್ಮ ಕಾವ್ಯ ಮೋಹನತರಂಗಿಣಿಯಲ್ಲಿ ಹಕ್ಕಿಗಳ ಕೂಗುವ ಇಂಚರವನ್ನು ಹೇಳುವಾಗ ಹಲುಬುವ "ಪರ್ಲಬೆಳವ ಮತ್ತು ಕುಪ್ಪರಸೆಟ್ಟಿ" ಎಂದು ಬೆಳವ ಹಕ್ಕಿಯ ಬಗ್ಗೆ ಉಲ್ಲೇಖಿಸಿದ್ದಾರೆ. ಬೆಳವ ಪ್ರಭೇದದ ಹಕ್ಕಿಗಳ ಕೂಗು ಸುಮಧುರವಾಗಿ ಕಿವಿ ತುಂಬಿದನ್ನು ತಮ್ಮ ಕಾವ್ಯದಲ್ಲಿ ಹೇಳಲು ಈ ಹಕ್ಕಿಯನ್ನು ಉಲ್ಲೇಖಿಸಿದ್ದಾರೆ. ಹೀಗೆ ಕವಿಗಳನ್ನು, ಪಕ್ಷಿ ಪ್ರಿಯರನ್ನು, ಪಕ್ಷಿ ತಜ್ಞರನ್ನು, ಮಕ್ಕಳನ್ನು ಆಕರ್ಷಿಸುವ ಆ ಹಕ್ಕಿಗಳೇ "ಕಂದು ಬೆಳವ ಹಕ್ಕಿ"ಗಳು.

ಕಂದು ಮಿಶ್ರಿತ ಬೂದು ಹಕ್ಕಿ, ದೇಹದ ಮೇಲೆ ಕಂದು, ಕೆಳಭಾಗವು ತಿಳಿಗಂದು ಮಿಶ್ರಿತ ಬಿಳಿ, ಬೂದು ರೆಕ್ಕೆಗಳ ತುದಿಯಲ್ಲಿ ಕಡು ಕಂದು, ರೆಕ್ಕೆಗಳನ್ನು ಬಿಚ್ಚಿದಾಗ ನೀಲಿ ಬಣ್ಣ ಕಾಣುತ್ತದೆ. ಕುತ್ತಿಗೆಯ ಎರಡು ಬದಿಯಲ್ಲಿ ಕಂದು ಮಿಶ್ರಿತ ಕಪ್ಪು ಚುಕ್ಕೆಗಳ ಪಟ್ಟಿಯು ಎದ್ದು ಕಾಣುತ್ತದೆ. ಉದ್ದವಾದ ಬಾಲ, ತೆಳುವಾದ ದೇಹ, ಬೂದು ಮಿಶ್ರಿತ ನೀಲ ಛಾಯೆಯ ತಲೆ ಮತ್ತು ಕುತ್ತಿಗೆ, ಕೆಳಭಾಗದಲ್ಲಿ ಗುಲಾಬಿ ಬಣ್ಣವನ್ನು ಹೊಂದಿರುತ್ತವೆ. ಮೇಲಿನ ಭಾಗವು ರೆಕ್ಕೆಗಳ ಉದ್ದಕ್ಕೂ ನೀಲಿ-ಬೂದು ವರ್ಣದ ಪುಕ್ಕಗಳಿವೆ. ಕಣ್ಣು ಹಾಗೂ ಕೊಕ್ಕು ಕಪ್ಪಾಗಿವೆ. ಕೆಂಪಾದ ಕಾಲುಗಳಿವೆ. ಇವುಗಳ ಕೂಗು ಕೂ.......ರುರು........ರುರು......... ಎಂದು ನಕ್ಕಂತೆ.






ಇವು ಶುಷ್ಕ ಕೃಷಿ ಭೂಮಿ ಮತ್ತು ಅದರ ವ್ಯಾಪ್ತಿಯ ಪ್ರದೇಶಗಳಲ್ಲಿ, ಬೆಟ್ಟ, ಬಂಡೆ, ಕುರುಚಲು ಕಾಡುಗಳ ಪೊದೆ ಮರಗಳಲ್ಲಿ ಜೊತೆಯಾಗಿ ವಾಸಿಸುವ ಸಾಧು ಹಕ್ಕಿಗಳಾಗಿವೆ. ಇವುಗಳು ದೊಡ್ಡ ಗುಂಪುಗಳಲ್ಲಿ ವಾಸಿಸುವುದಿಲ್ಲ. ನೀರನ್ನು ಅರಸಿ ಬಂದಾಗ ಹೊಳೆ ಅಥವಾ ಕೆರೆಗಳ ಸನಿಹದಲ್ಲಿ ಸಣ್ಣ ಗುಂಪುಗಳಲ್ಲಿ ನೀರಿನ ಅಂಚಿನಲ್ಲಿ ಕುಳಿತು ನೀರನ್ನು ಗುಟುಕಿಸುತ್ತವೆ. ನೆಲದ ಮೇಲೆ ಬಿದ್ದ ಬೀಜ-ಕಾಳುಗಳನ್ನು ಮೇಯುತ್ತವೆ. ಚೆಲ್ಲಿದ ಕಾಳುಗಳನ್ನು ಮಣ್ಣಿನಿಂದ ಕೊಕ್ಕಿನಲ್ಲಿ ಹೆಕ್ಕಿ ಭಕ್ಷಿಸುತ್ತವೆ. ಕತ್ತನ್ನು ಆ ಕಡೆ ಈ ಕಡೆ ಹೊರಳಾಡಿಸುತ್ತಾ, ಅವಸರವಾಗಿ ಅತ್ತಿಂದಿತ್ತ ನಿರ್ಭಯವಾಗಿ ನೆಲದಮೇಲೆ ಅಲೆದಾಡುತ್ತಾ ಆಹಾರ ಮೇಯುವ ಇವು ತೊಂದರೆ ಕಂಡು ಬಂದಾಗ ಪಟಪಟನೆ ರೆಕ್ಕೆಗಳನ್ನು ಬಡಿಯುತ್ತಾ ಹಾರಿ ದೂರ ಹೋಗುತ್ತವೆ. ನೀರಿಗಿಳಿದು ಸ್ನಾನ ಮಾಡಲು ಇಷ್ಟ ಪಡುತ್ತವೆ.




ಮಿಲನ ಪೂರ್ವದಲ್ಲಿ ಗಂಡು-ಹೆಣ್ಣುಗಳೆರಡು ಪ್ರಣಯಾಚರಣೆಯಲ್ಲಿ ತೊಡಗಿ, ಗಂಡು ಪ್ರಣಯದ ಗುಟುಕನ್ನು ನೀಡುತ್ತಾ ಪ್ರಚೋದಿಸಿದರೆ ಹೆಣ್ಣು ಪ್ರಣಯದ ಗುಟುಕನ್ನು ಸ್ವೀಕರಿಸಲು ಬೇಡಿಕೆಯನ್ನಿಡುತ್ತದೆ. ತಕ್ಷಣ ಗಂಡು ಹಕ್ಕಿಯು ಪ್ರಣಯದ ತುತ್ತನ್ನು ಹೆಣ್ಣು ಹಕ್ಕಿಯ ಕೊಕ್ಕಿನಲ್ಲಿಡುತ್ತದೆ. ಇಲ್ಲವೇ ಗಂಡು ಹಕ್ಕಿಯು ಪ್ರಣಯಕ್ಕೆ ಹೆಣ್ಣನ್ನು ಸಂಮೋಹನಗೊಳಿಸಲು "ಪ್ರಣಯ ಪ್ರದರ್ಶನ" ಅಥವಾ "ಪುಕ್ಕಗಳನ್ನು ಅರಳಿಸುವಿಕೆ" ಯನ್ನು ತೋರ್ಪಡಿಸುತ್ತದೆ. ನಂತರ ಗಂಡು-ಹೆಣ್ಣುಗಳು ಮಿಲನಗೊಳ್ಳುತ್ತವೆ. ಸಂತಾನಾಭಿವೃದ್ಧಿ ಸಮಯವು ನಿರ್ದಿಷ್ಟ ಕಾಲಮಿತಿಯನ್ನು ಹೊಂದಿರುವುದಿಲ್ಲ. ಪೊದೆಗಳಲ್ಲಿ ಕಡ್ಡಿಗಳಿಂದ ಅಡ್ಡಾದಿಡ್ಡಿಯಾದ ವೃತ್ತಾಕಾರದ ಗೂಡನ್ನು ಕಟ್ಟಿ ಎರಡು ಬಿಳಿ ಮೊಟ್ಟೆಗಳನ್ನಿಟ್ಟು ಮರಿ ಮಾಡುತ್ತವೆ.




ಕಂದು ಬೆಳವ ಹಕ್ಕಿಯನ್ನು ಸಂಸ್ಕೃತದಲ್ಲಿ ಕಪೋತ ಎಂದು, ಆಂಗ್ಲಭಾಷೆಯಲ್ಲಿ "ಲಿಟಲ್ ಬ್ರೌನ್ ಡೌ" (Little Brown Dove), "ಲಾಫಿಂಗ್ ಡೌ" (Laughing Dove) ಅಥವಾ "ಸೆನೆಗಲ್ ಡೌ" (Senegal Dove) ಎಂದು ಹೆಸರಿಸಿ "ಸ್ಪಿಲೊಪೆಲಿಯಾ ಸೆನಗಾಲೆನ್ಸಿಸ್" (Spilopelia senegalensis) ಎಂದು ಹಕ್ಕಿಯನ್ನು ಶಾಸ್ತ್ರೀಯವಾಗಿ ಹೆಸರಿಸಿ, "ಕೊಲಂಬಿಫಾರ್ಮಿಸ್" (Columbiformes) ಗಣದ "ಕೊಲಂಬಿಡೇ" (Columbidae) ಕುಟುಂಬಕ್ಕೆ ಸೇರಿಸಲಾಗಿದೆ.




ಕಂದು ಬೆಳವ ಹಕ್ಕಿಗಳ ಉಪ ಪ್ರಬೇಧಗಳು ಆಫ್ರಿಕಾ, ಸೌದಿ ಅರೇಬಿಯಾ, ಇರಾನ್, ಅಫ್ಘಾನಿಸ್ತಾನ, ಪಾಕಿಸ್ತಾನ, ಇಸ್ರೇಲ್, ಲೆಬನಾನ್, ಸಿರಿಯಾ ಮತ್ತು ಟರ್ಕಿಯಲ್ಲಿಯೂ ಕಂಡುಬರುತ್ತವೆ. ಗುಜರಾತ್ ನಲ್ಲಿ ಕಂಡ ಕೆಲ ಕಂದು ಬೆಳವ ಹಕ್ಕಿಗಳು ಪಾಕಿಸ್ತಾನದ 200 ಕಿ.ಮೀ ಉತ್ತರಕ್ಕಿರುವ ಸಮುದ್ರದಲ್ಲಿ ದಣಿವಾರಿಸಿಕೊಳ್ಳಲು ಹಡಗಿನಲ್ಲಿ ಇಳಿದು ದಣಿವಾರಿಸಿಕೊಂಡು ಮತ್ತೆ ಹಾರಿಹೋದ ಬಗ್ಗೆ ದಾಖಲಿಸಲಾಗಿದೆ.




ಲೇಖನ : ಶಶಿಧರಸ್ವಾಮಿ. ಹಿರೇಮಠ

ಕದರಮಂಡಲಗಿ, ಹಾವೇರಿ ಜಿಲ್ಲೆ.



© ORNITOLOG82_ISTOCK_GETTY IMAGES PLUS

**ವಿವಿ ಅಂಕಣ**

# ಒಂದು ಮೊಟ್ಟೆಯ ಕಥೆ!

‘ಸರಿ ಶಂಕ್ರಣ್ಣ ತಂದೆ ಇರು... ನಾನು ತರೋಷ್ಟ್ರಲ್ಲಿ ಸಿಪ್ಪೆ ತೆಗ್ದಿರು’ ಎಂದು ಹೇಳುತ್ತಾ ಚಾಕು ತರಲು ಓಡಿದೆ. ‘ಸರಿ ಆಯ್ತು ಹೋಗ್ಬಾ...’ ಎಂದು ಶಂಕ್ರಣ್ಣ ಹೇಳಿದ್ದು ಪೂರ್ತಿ ಕೇಳಿಸುವಷ್ಟರಲ್ಲಿ ನಾನು ಲ್ಯಾಬ್ (ಪ್ರಯೋಗ ಶಾಲೆ) ನಿಂದ ದೂರ ಬಂದಿದ್ದೆ. ಆದರೆ ನಾನು ಉಪ್ಪು ಮತ್ತು ಚಾಕು ತಂದರೂ ಶಂಕ್ರಣ್ಣ ಸಿಪ್ಪೆ ಬಿಡಿಸಿರಲಿಲ್ಲ. ‘ಯಾಕಣ್ಣ ಇನ್ನು ತೆಗ್ದಿಲ್ವಾ?’ ಎಂದು ಲಾಲಾರಸ ಆವರಿಸಿದ್ದ ಬಾಯಿಂದಲೇ ಹೇಳಿದೆ. ‘ಆಯ್ತು ಆಯ್ತು ಬಾರೋ...’ ಎಂದ ಶಂಕ್ರಣ್ಣನ ಮುಖದಲ್ಲಿ ಏನೋ ಸಾಧಿಸಿದ ಕಳೆ ಮಿಶ್ರಿತ ಮುಗುಳುನಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಇದು ನಡೆದದ್ದು ನಾನು ಏಳನೇ ತರಗತಿಯಲ್ಲಿದ್ದಾಗ. ನಾನು ಮತ್ತು ನನ್ನ ನಾಲ್ಕು ಜನ ಸ್ನೇಹಿತರು ಏಳನೇ ತರಗತಿಯಲ್ಲಿ ಓದುತ್ತಿದ್ದಾಗ, ಇಂಗ್ಲೀಷ್ ಮಾಧ್ಯಮದ ಪ್ರೌಢಶಾಲೆಗೆ ಸೇರಲು ಬೇಕಾದ ತರಬೇತಿಯನ್ನು ಪಡೆದುಕೊಳ್ಳಲು ಶಾಲೆಯಲ್ಲಿಯೇ ಉಳಿದುಕೊಳ್ಳುತ್ತಿದ್ದೆವು. ನಮ್ಮನ್ನು ನೋಡಿಕೊಳ್ಳಲೆಂದು ನಮ್ಮ ಶಾಲೆಯಲ್ಲಿಯೇ ಓದಿದ್ದ ನಮಗಿಂತ 6-7 ವರ್ಷ ದೊಡ್ಡವರು ಆದ ಹಾಗೆಯೇ ನಮಗಿಂತ ದಪ್ಪ ಹಾಗೂ ಉದ್ದವಿದ್ದ ಶಂಕ್ರಣ್ಣನು ಜೊತೆಯಲ್ಲಿದ್ದರು. ಅಲ್ಲಿ ತಂಗಿದ್ದ ಆ ಒಂದು ವರುಷದಲ್ಲಿ ನಾವು ಮಲಗಿ ಏಳುತ್ತಿದ್ದದ್ದು ನಮ್ಮ ಶಾಲೆಯ ಲ್ಯಾಬ್ (ಪ್ರಯೋಗಶಾಲೆ) ನಲ್ಲೇ.

ಶನಿವಾರದ ಮಧ್ಯಾಹ್ನ ಮತ್ತು ಸಂಜೆಯ ನಡುವಿನ ಸಮಯ. ನಾನೂ ಮತ್ತು ಶಂಕ್ರಣ್ಣ ನಮ್ಮ ಎಸ್. ಆರ್. ವಿ. ಕೆ. ಶಾಲೆಯ ವರಾಂಡದಲ್ಲಿ ನಡೆದು ಲ್ಯಾಬ್ ಕಡೆಗೆ ಹೋಗುತ್ತಿದ್ದೆವು. ಆ ಶನಿವಾರ ರಜಾದಿನವೆಂದು ತೋರುತ್ತದೆ. ಅದಕ್ಕೆ ಬೇರೆ ಸ್ನೇಹಿತರು ಅಂದಿನ ನಮ್ಮ ಪ್ರಯೋಗಕ್ಕೆ ಹಾಜರಿರಲಿಲ್ಲ. ನಾನು ಮತ್ತು ಶಂಕ್ರಣ್ಣ ಹಾಗೆ ವರಾಂಡದಲ್ಲಿ

ನಡೆದು ಹೋಗುವಾಗ ಹೀಗೆ ಯಾವುದೋ ವಿಷಯಕ್ಕೆ ಬೆಂಕಿ ಮತ್ತು ಅದರ ಗುಣಲಕ್ಷಣಗಳ ಚರ್ಚೆ ಶುರುವಾಯಿತು. ಬಹುಶಃ ಆ ದಿನ ಮಧ್ಯಾಹ್ನದ ಊಟ ಇನ್ನೂ ಆಗಿರಲಿಲ್ಲ, ಅದಕ್ಕೇ ಇರಬೇಕು ಊಟ ತಯಾರಿಸಲು ಮುಖ್ಯ ರುವಾರಿಯಾದ ಅಗ್ನಿ ದೇವನ ಬಗ್ಗೆ ಚರ್ಚೆ ಎದ್ದದ್ದು. ಶಂಕ್ರಣ್ಣನಿಗೂ ಊಟ-ಭೋಜನಾದಿಗಳಿಗೂ ಅವಿನಾಭಾವ ಸಂಬಂಧವಿದೆ, ಇನ್ನೊಂದು ಘಟನೆಯ ನೆನಪೂ ಬರುತ್ತಿದೆ. ಅದನ್ನು ಹೇಳಲು ಹೊರಟರೆ ಈಗಿನ ವಿಷಯ ಮುಂದುವರೆಯುವುದಿಲ್ಲ. ಅದನ್ನು ಬಿಡಿ, ಹೀಗೆ ಮಾತನಾಡುವಾಗ ಶಂಕ್ರಣ್ಣನು, 'ಹೇ.. ಜೈ!, ಬೆಂಕಿ ಪೇಪರ್ ನ ಸುಡುತ್ತೋ ಇಲ್ವೋ?' ಎಂದು ಟಕ್ಕನೆ ಕೇಳಿಬಿಟ್ಟರು. ನಾನು ಅದಕ್ಕೆ 'ಸುಡುತ್ತೆ' ಎಂದೆ. 'ನೀರು ಬೆಂಕೀನ ಆರ್ಸುತ್ತೋ ಇಲ್ವೋ?' ಮತ್ತೊಂದು ಪ್ರಶ್ನೆ. ನಾನದಕ್ಕೆ 'ಆರ್ಸುತ್ತೆ' ಎಂದೆ. 'ಹಾಗಾದ್ರೆ ನಿಂಗೊಂದ್ ಪ್ರಶ್ನೆ, ಪೇಪರ್ ಬಟ್ಲಲ್ಲಿ ನೀರು ಹಾಕಿ ಬೆಂಕಿಯ ಮೇಲಿಟ್ರೆ ಏನಾಯ್ತದೆ?' ಎಂದನು. ನಾನು ಅದಕ್ಕೆ  ನನಗೆ ತಿಳಿದ ಎಲ್ಲಾ ವೈಜ್ಞಾನಿಕ ಕೋನಗಳಲ್ಲಿ ಯೋಚಿಸಿದೆ. ಅಷ್ಟೇನು ಗೊತ್ತಾಗಲಿಲ್ಲ. ನಂತರ ಸಾಮಾನ್ಯ ಜ್ಞಾನ ಬಳಸಿ ಹೀಗೆ ಹೇಳಿದೆ, 'ಅದ್ರಲ್ಲೇನೈತೆ ಪೇಪರ್ ಸುಟ್ಟೋಗಿ, ನೀರು ಬೆಂಕಿ ಮೇಲೆ ಬಿದ್ದು ಬೆಂಕಿ ಆರೋಯ್ತದೆ'. ಸಾಮಾನ್ಯವಾಗಿ ಯೋಚಿಸಿದರೆ ಅದೇ ಅಲ್ಲವೇ ಆಗೋದು. ಅದಕ್ಕೆ ನನ್ನ ಉತ್ತರ ಎಂದಿನಂತೆ ಸರಿಯಿರುತ್ತದೆ ಎಂದುಕೊಂಡು, ಶಂಕ್ರಣ್ಣ 'ಹು..' ಎನ್ನುತ್ತಾನೆ ಎಂದು ಕಾಯುತ್ತಿದೆ. ಆದರೆ ಶಂಕ್ರಣ್ಣ ನನಗೆ ಶಾಕ್ ಕೊಟ್ಟುಬಿಟ್ಟ. 'ಇಲ್ಲಾ..' ಎಂದು ಮುಗುಳ್ನಕ್ಕ. ನಾನು 'ಇನ್ನೇನಾಯ್ತದೆ??' ಎಂದು ಕೇಳುವಷ್ಟರಲ್ಲಿ ಶಂಕ್ರಣ್ಣನೇ 'ಪೇಪರೂ ಸುಡಲ್ಲ, ಬೆಂಕಿನೂ ಆರಲ್ಲ. ಅದ್ರು ಬದ್ಲು ನೀರು ಕಾಯ್ದು ಕುದಿತದೆ' ಎಂದ ಕೂಡಲೆ, "ಛಾನ್ಸೇ ಇಲ್ಲ, ಬೆಂಕಿ ಇರೋದೇ ಸುಡಕೆ. ಅಂತದ್ರಲ್ಲಿ ಪೇಪರು.. ನೀರು.. ಕುದ್ಯೋದು.. ಛಾನ್ಸೇ ಇಲ್ಲ" ಎಂದೆ.

ಶಂಕ್ರಣ್ಣ ಈ ಮುಂಚೆಯೂ ನಮಗೆ ಹಲವಾರು ಚಕಿತಗೊಳಿಸುವ ವಿಜ್ಞಾನದ ಪ್ರಯೋಗಗಳನ್ನು ಮಾಡಿಸಿದ್ದ ಕಾರಣ, ಯಾವುದೋ ಮೂಲೆಯಲ್ಲಿ ಇದ್ದರೂ ಇರಬಹುದು ಎನಿಸುತ್ತಿತ್ತು. ಆದರು ನಂಬಲು ಕಷ್ಟ. ಆಗಿನ ಏಳನೇ ತರಗತಿಯ ವಿಧ್ಯಾರ್ಥಿಯ ಪರಿಸ್ಥಿತಿ ನೆನೆಸಿಕೊಳ್ಳಿ. ಅಷ್ಟು ಹೊತ್ತಿಗೆ ಶಂಕ್ರಣ್ಣನೇ 'ಬಾ ಆ ಪ್ರಯೋಗ ಮಾಡಿ ತೋರ್ಸ್ತೀನಿ' ಎಂದಾಯಿತು. ಈ ಮಾತುಗಳು ಕೇಳಿದ ಮೇಲೆಯೇ ಸ್ವಲ್ಪ ಸಮಾಧಾನವಾದದ್ದು. ಅಲ್ಲಿಯವರೆಗೆ ನಿಧಾನವಾಗಿ ಇಡುತ್ತಿದ್ದ ಹೆಜ್ಜೆಗಳು, ಈಗ ಬೇಗ ಬೇಗ ಸಾಗತೊಡಗಿದವು. ನಮ್ಮ ಬಿಡಾರವೇ ಲ್ಯಾಬ್ ಆದ್ದರಿಂದ, ನಮ್ಮ ಪ್ರಯೋಗಕ್ಕೆ ಬೇಕಿದ್ದ ಸಾಮಾಗ್ರಿಗಳು ಬೇಗನೆ ಸಿಕ್ಕವು. ಎಲ್ಲಾ ಸಿದ್ದಪಡಿಸಿಕೊಂಡು ನೀರು ತುಂಬಿದ ಪೇಪರ್ ಕಪ್ಪನ್ನು ಬೆಂಕಿಯ ಮೇಲೆ ಇಡಲಾಯಿತು. ಬಾಲ ಸುಟ್ಟ ಬೆಕ್ಕಿನಂತೆ ಅಲ್ಲಿಯವರಗೆ ಕಾಯುತ್ತಿದ್ದ ನನಗೆ, ಅಬ್ಬಾ ಇನ್ನೇನು ಕೆಲ ಕ್ಷಣಗಳಲ್ಲಿ ಉತ್ತರ ದೊರೆಯುವುದೆಂಬ ನಿರಾಳ ಭಾವನೆ ಸಮೀಪಿಸುತ್ತಿತ್ತು. ಪ್ರಯೋಗ ಪ್ರಾರಂಭವಾಯಿತು, ಹತ್ತು ಸೆಕೆಂಡ್ ಕಳೆಯಿತು ಪೇಪರ್ ಸುಡಲಿಲ್ಲ. ಅರ್ಧ ನಿಮಿಷ ಕಳೆಯಿತು ಪೇಪರ್ ಸುಡಲಿಲ್ಲ. ಓಹೋ ಶಂಕ್ರಣ್ಣನೇ ಸರಿ. ಇದ್ಯಾಕೋ ಸುಡುವುದಿಲ್ಲ ಎಂದು ಮನದಟ್ಟಾಗುತ್ತಿದ್ದಂತೆಯೇ ಮನದಲ್ಲಿ ಇನ್ನೊಂದು ಆಲೋಚನೆ ಹುಟ್ಟಿತು. ಹೇಗಿದ್ದರೂ ಪೇಪರ್ ಕಪ್ ಸುಡುತ್ತಿಲ್ಲ. ಶಂಕ್ರಣ್ಣ ಬೇರೆ, ನೀರು ಕುದಿಯುವವರೆಗೆ ಕಾಯುತ್ತದೆ ಎಂದಿದ್ದಾನೆ. ಹಾಗಿದ್ದಲ್ಲಿ ನಾವು ಎಂದಾದರು ಕಾಡಿಗೆ ಹೋಗಿ ಅಲ್ಲಿ

ತಪ್ಪಿಸಿಕೊಂಡುಬಿಟ್ಟರೆ, ಅಲ್ಲಿ ಅಡಿಗೆ ಮಾಡಿ ತಿನ್ನಲು ಪಾತ್ರೆ ಸಿಗುವುದಿಲ್ಲ. ಆಗ ಈ ಪ್ರಯೋಗವನ್ನು ಉಪಯೋಗಿಸಿಕೊಳ್ಳಬಹುದಲ್ಲವೇ? ಎಂದೆನಿಸಿ "ಹಂಗಾರೆ...! ನಾವು ಯಾವಾಗ್ಲಾದ್ರು ಕಾಡಲ್ಲಿ ಕಳ್ದೋಗಿ, ಪಾತ್ರೆ ಸಿಕ್ಕಿಲ್ಲ ಅಂದ್ರೆ ಹಿಂಗೆ ಮಾಡಿ ಅಡಿಗೆ ಮಾಡ್ಬೋದಾ?" ಕೇಳಿಯೇ ಬಿಟ್ಟೆ. 'ಹೌದೌದು ಮಾಡ್ಬೋದು. ಬೇಕಿದ್ರೆ ಈಗ್ಲೆ ಮೊಟ್ಟೆನ ಇದ್ರಲ್ಲಿ ಬೇಯ್ಸಿ ವರ್ಕ್ ಆಗುತ್ತೋ ಇಲ್ವೋ ನೋಡ್ಬೋದು' ಎಂದು ಹೇಳಿ ನಕ್ಕುಬಿಟ್ಟರು. ನಾನು ಅದಕ್ಕೆ ಅವರ ಮುಖವನ್ನು ದಿಟ್ಟಿಸಿ ನೋಡಿದೆ. ಮುಗುಳ್ನಗೆಯ ಆ ಸಮಯದಲ್ಲಿ, ನಮ್ಮ ಕಣ್ಣುಗಳಲ್ಲೇ ವಿಚಾರ ವಿನಿಮಯವಾಗಿ ನಿರ್ಧಾರವೂ ಆಗಿಬಿಟ್ಟಿತು. ಅದೇನಿಲ್ಲ, ಆ ಮೊಟ್ಟೆ ತಂದು ಬೇಯಿಸುವ ಕಾರ್ಯಕ್ರಮ ಈಗಲೇ ಮಾಡಿಬಿಡೋಣವೆಂದು. ಅಣ್ಣ ಜೇಬಿಗೆ ಕೈ ಹಾಕಿ ಹಣ ಕೊಟ್ಟದ್ದು, ನಾನು ಮೊಟ್ಟೆ ತಂದದ್ದು ಕ್ಷಣಾರ್ಧದಲ್ಲಿ ನಡೆದುಹೋಯಿತು. ಮೊಟ್ಟೆಯನ್ನು ಪೇಪರ್ ಕಪ್ ನಲ್ಲಿ ಹಾಕಿ ಮೊಟ್ಟೆ ಬೇಯುವುದನ್ನೇ ಕಾಯುತ್ತಾ ಕುಳಿತೆವು. ಮಧ್ಯಾಹ್ನ ಊಟಮಾಡಿರದ ನಮಗೆ, ಆ ದಿನದ ಪ್ರಯೋಗಶಾಲೆ-ಪಾಕಶಾಲೆ ಒಂದೇ ಆದಂತಿತ್ತು.

ಆ ಪೇಪರ್ ಕಪ್ಪಿನಲ್ಲಿದ್ದ ನೀರಿನ ಒಳಗಿಂದ ಸಣ್ಣ ಸಣ್ಣ ಗುಳ್ಳೆಗಳು ಬರಲಾರಂಭಿಸಿತು. ಅದು ನೀರು ಕುದಿಯುವ ಮುನ್ಸೂಚನೆಯಾದ್ದರಿಂದ ಮೊಟ್ಟೆ ಬೆಂದಿರುತ್ತದೆ, ಜೊತೆಗೆ ಅಣ್ಣನು ಸಾಧಿಸಬೇಕಿದ್ದ ವಿಷಯ, 'ನೀರು ಕುದಿಯುವವರೆಗೆ ಪೇಪರ್ ಸುಡುವುದಿಲ್ಲ' ಎಂಬ ಮಾತು ಒಟ್ನೊಟ್ಟಿಗೆ ನಿಜವಾಗುವ ಸಮಯ ಬಂದೇ ಬಿಟ್ಟಿತ್ತು. ಒಂದೇ ಏಟಿಗೆ ಎರಡು ಹಕ್ಕಿ ಎಂಬಂತೆ, ಅದೇ ಖುಷಿಗೆ ಮಾಡಿದ ಪ್ರಯೋಗದ ಎರಡೆರಡು ಪ್ರತಿಫಲಗಳನ್ನು ಆಚರಿಸಲು ಪ್ರಯೋಗಕ್ಕೆ ಬಳಸಿದ ಮೊಟ್ಟೆಯನ್ನು ವ್ಯರ್ಥ ಮಾಡದೆ, ಸರಿಯಾಗಿ ಬೆಂದಿದೆಯೋ ಇಲ್ಲವೋ ಎಂದು ತಿಳಿಯಲು ಒಮ್ಮೆ ತಿಂದು ನೋಡೋಣವೆಂದುಕೊಂಡೆವು. ನಂತರ ಅನಿಸಿಕೆ ನಿರ್ಧಾರವಾಯಿತು. (ಸೂಚನೆ: ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ನಾವು ಮೊಟ್ಟೆಯನ್ನು ತಿನ್ನುವ ಉದ್ದೇಶದಿಂದ ಇವೆಲ್ಲ ಮಾಡಿಲ್ಲ. ಬದಲಿಗೆ ಒಲಿದು ಬಂದದ್ದನ್ನು ಉಪಯೋಗಿಸಿಕೊಂಡು ಪ್ರಯೋಗವನ್ನು ಬಲಪಡಿಸುತ್ತಿದ್ದೇವಷ್ಟೆ.) ಆ ನಿಟ್ಟಿನಲ್ಲಿ ಈ ಮೇಲೆ ಹೇಳಿದ ಹಾಗೆ ಚಾಕು ತರಲು ನಾನು ಓಡಿದ್ದು, ತಂದದ್ದು. ಆದರೆ ನಮ್ಮ ಆತುರದ ನಿರ್ಣಯಕ್ಕೆ ತಲೆಬಾಗದ ಮೊಟ್ಟೆ, ಪೂರ್ತಿಯಾಗಿ ಬೆಂದಿರಲಿಲ್ಲ. ಅದಕ್ಕಾಗಿಯೇ ಸಿಪ್ಪೆ ಬಿಡಿಸುವಾಗ ಶಂಕ್ರಣ್ಣನಿಗೆ ಸಮಯ ತೆಗೆದುಕೊಂಡದ್ದು. ಹೇಗೋ ಮಾಡಿ ಸಿಪ್ಪೆ ತೆಗೆದು, ಕುಯ್ದು, ಸ್ವಲ್ಪ ಉಪ್ಪನ್ನು ಉದುರಿಸಿ, ಅರೆಬೆಂದ ಮೊಟ್ಟೆಯನ್ನು ಸ್ವಾಹಾ ಮಾಡಲಾಯಿತು. ಹಸಿದ ಹೊಟ್ಟೆಯಾದ್ದರಿಂದ ಅರೆಬೆಂದ ಮೊಟ್ಟೆಯ ರುಚಿ ಯಾವುದೇ ತೊಂದರೆ ಕೊಡಲಿಲ್ಲ. ಅದಾದ ಬಳಿಕವೆ ನನಗೆ ತಿಳಿದದ್ದು, ಈ ಸರಿಯಾದ ಉಷ್ಣತೆಗೆ ಮತ್ತು ಮೊಟ್ಟೆಗೆ ಇರುವ ಸಂಬಂಧ ಹಾಗೂ ಅಡುಗೆ ಮನೆಯಲ್ಲಿ ಸರಿಯಾದ ರುಚಿ ಹೊರಗೆಳೆಯುವ ಅಮ್ಮನ ಚಾತುರ್ಯತೆ.

ಮೊಟ್ಟೆ ಎಂದೊಡನೆ ನನಗೆ ಚಿಕ್ಕಂದಿನ ಈ ಘಟನೆ ಯಾವಾಗಲೂ ನೆನಪಾಗುತ್ತದೆ. ಆದರೆ ಇದು ಕೇವಲ ಒಂದು ಮೊಟ್ಟೆಯ ಕಥೆ. ನಾನು ಈ ಮಾಸದ ವಿ ವಿ ಅಂಕಣದಲ್ಲಿ ಹೇಳಲು ಹೊರಟಿರುವುದು ಪ್ರಪಂಚದ ನಾ ನಾ ಭಾಗದಿಂದ ಆರಿಸಿದ 634 ಪ್ರಭೇದ ಪಕ್ಷಿಗಳ

ಮೊಟ್ಟೆ ಕಥೆ. ಸಾಮಾನ್ಯವಾಗಿ ಮೊಟ್ಟೆ ಎಂದೊಡನೆ ನಮಗೆ ನೆನಪಾಗುವುದು ಕೋಳಿ ಮೊಟ್ಟೆ. ಅದನ್ನು ಬಿಟ್ಟು ಬೇರೆ ಹೆಸರಿಸಿ ಎಂದರೆ ಬಹುಶಃ ಗುಬ್ಬಚ್ಚಿಯ ಮೊಟ್ಟೆ, ಕಾಗೆಯ ಮೊಟ್ಟೆ ಹೀಗೆ ಪಟ್ಟಿ ಮಾಡುತ್ತಾ ಹೋಗಬಹುದು. ಪಕ್ಷಿಗಳೆಲ್ಲವೂ ಮೊಟ್ಟೆ ಇಡುತ್ತವೆ. ಆದರೆ ನೀವು ಗಮನಿಸಿರಬಹುದು, ನಾಟಿ ಕೋಳಿಯ ಮೊಟ್ಟೆ ಮತ್ತು ಫಾರಂ ಕೋಳಿಯ ಮೊಟ್ಟೆಯ ಗಾತ್ರ ಮತ್ತು ಬಣ್ಣ ಬೇರೆ ಇರುತ್ತದೆ. ಏಕೆ ಹೀಗಿರಬಹುದು?



ನೋಡಿದಿರಾ, ತಕ್ಷಣ ಕೇಳಿದರೆ ಮಾತೇ ಬರುತ್ತಿಲ್ಲ. ಆದರೂ ನಮ್ಮಲ್ಲಿ ಹೆಚ್ಚು ಜನ ಇದನ್ನು ಚಿಕ್ಕ ವಯಸ್ಸಿನಿಂದಲೂ ತಿನ್ನುತ್ತಾ ಬಂದಿದ್ದೇವೆ. ಆದರೆ ಎಂದೂ ಏಕೆ ಹೀಗೆ ಎಂದು ಕೇಳಿರಲಿಕ್ಕಿಲ್ಲ. ಅದರ ಬದಲಿಗೆ ಉಪ್ಪೋ, ಖಾರವೋ ಕಡಿಮೆ ಆದರೆ ಕೇಳಿರುತ್ತೇವೆ. ಪರವಾಗಿಲ್ಲ ಬಿಡಿ. ಈಗ ಅದೇ ಪ್ರಶ್ನೆಗೆ ಉತ್ತರ ಏನೆಂದು ನೋಡಿಬಿಡೋಣ.

ನಮಗೆ ತಿಳಿದ ಹಾಗೆ ಎಲ್ಲಾ ಪಕ್ಷಿಗಳು ಮೊಟ್ಟೆ ಇಡುತ್ತವೆ ಅಲ್ಲವೆ? ಹೌದು. ಆದರೆ ಒಂದು ಪ್ರಭೇದದ ಪಕ್ಷಿ ಮೊಟ್ಟೆಯ ಹಾಗೆ ಇನ್ನೊಂದು ಪ್ರಭೇದದ ಪಕ್ಷಿಯ ಮೊಟ್ಟೆ ಇರುವುದಿಲ್ಲ. ಅವುಗಳ ಆಕಾರದಲ್ಲಿ ವ್ಯತ್ಯಾಸವಿರಬಹುದು, ಬಣ್ಣಗಳಲ್ಲಿ ವ್ಯತ್ಯಾಸವಿರಬಹುದು ಅಥವಾ ಗಾತ್ರದಲ್ಲಿ ವ್ಯತ್ಯಾಸವಿರಬಹುದು. ಕಾರಣವಿಲ್ಲದೆ ಹೀಗೆ ಇರಲು ಪ್ರಕೃತಿಯಲ್ಲಿ ಮಾತ್ರ ಸಾಧ್ಯವಿಲ್ಲ. ಏನೋ ಕಾರಣ ಇದ್ದೇ ಇರುತ್ತದೆ. ಮೊಟ್ಟೆಯ ಬಣ್ಣ ಕೆಲವೊಮ್ಮೆ ಪರಭಕ್ಷಕರಿಂದ ರಕ್ಷಿಸಿಕೊಳ್ಳುವಲ್ಲಿ ಉಪಯೋಗವಾಗಿರಬಹುದು. ಮೊಟ್ಟೆಯ ಆಕಾರ ಮತ್ತು ಬಣ್ಣ ಆ ಮೊಟ್ಟೆಯನ್ನು ಬ್ಯಾಕ್ಟೀರಿಯಾಗಳಿಂದ ರಕ್ಷಿಸಲು ಕೆಲಸ ಮಾಡಬಹುದು ಅಥವಾ ಆ ಮೊಟ್ಟೆಗಳು ಎಷ್ಟು ಬಲವಾಗಿವೆ ಎಂದೂ ಹೇಳಬಹುದು. ಜೊತೆಗೆ ಬಣ್ಣದಿಂದ ಮೊಟ್ಟೆಯ ಉಷ್ಣಾಂಶದ ಮೇಲೆ ಪ್ರಭಾವ ಬೀರಬಹುದು. ಹೀಗೆ ವೈಜ್ಞಾನಿಕವಾಗಿ ಕೆಲವನ್ನು ಊಹಿಸಬಹುದು. ಜೊತೆಗೆ ಈ ಕೆಲವಕ್ಕೆ ಸ್ವಲ್ಪ ಮಟ್ಟಿಗೆ ಪುರಾವೆಯೂ ಇದೆ. ಅಂತಹುದೊಂದು ಪುರಾವೆಯನ್ನೇ ಈ ಸಂಚಿಕೆಯ ಸಂಶೋಧನೆಯಲ್ಲಿ ಹೇಳಲು ಹೊರಟಿರುವುದು.

ಅದೇನೆಂದರೆ, ಪಕ್ಷಿಯ ಮೊಟ್ಟೆಯ ಬಣ್ಣದಿಂದ ಆ ಮೊಟ್ಟೆಯ ಉಷ್ಣಾಂಶ ಬದಲಾಗುತ್ತದೆ ಎಂದು. ಇದನ್ನು ಸಂಶೋಧನೆಯ ಪದಗಳಲ್ಲಿ ಹೇಳುವುದಾದರೆ, ಭೂಮಿಯ ಮೇಲಿನ ಪಕ್ಷಿಗಳನ್ನೆಲ್ಲಾ ತೆಗೆದುಕೊಂಡರೆ ಶೀತ ಪ್ರದೇಶಗಳಲ್ಲಿರುವ ಅಂದರೆ ಉತ್ತರ ಧೃವಗಳಂತಹ ಪ್ರದೇಶಗಳಲ್ಲಿರುವ ಪಕ್ಷಿಗಳ ಮೊಟ್ಟೆಯ ಬಣ್ಣ ಗಾಢ (dark) ವಾಗಿರುತ್ತವೆ. ಭೂಮಧ್ಯ ರೇಖೆಯ ಉಷ್ಣವಲಯಕ್ಕೆ ಬಂದರೆ ಮೊಟ್ಟೆಯ ಬಣ್ಣ ತಿಳಿ (light) ಯಾಗಿ ಅಥವಾ ತಿಳಿ ನೀಲಿ ಬಣ್ಣಗಳಲ್ಲಿರುತ್ತವೆ ಎನ್ನುವುದೇ ಈ ಸಂಶೋಧನೆಯ ಸಾರಾಂಶ. ಅದಕ್ಕಾಗಿ ನ್ಯೂಯಾರ್ಕ್ ನ ಒಂದು ವಿಶ್ವವಿದ್ಯಾಲಯದ ಸಂಶೋಧಕರಾದ ಹ್ಯಾನ್ಲಿ ಮತ್ತು ವಿಸೋಕಿ ಪ್ರಪಂಚದ ನಾ ನಾ ಭಾಗದಿಂದ ಸುಮಾರು 634 ವಿವಿಧ ಪ್ರಭೇದದ ಪಕ್ಷಿಯ ಮೊಟ್ಟೆಗಳನ್ನು ಸಂಗ್ರಹಿಸಿದರು. ಈ ಸಂಗ್ರಹದಲ್ಲಿ, ಇಡೀ ಪ್ರಪಂಚದ ಪಕ್ಷಿಗಳನ್ನು 40 ಮುಖ್ಯ ಗುಂಪುಗಳನ್ನಾಗಿ ಮಾಡಿದರೆ, ಅದರಲ್ಲಿ 36 ಬಗೆಯ ಗುಂಪುಗಳಿಂದ ಆರಿಸಿದ ಪಕ್ಷಿಯ ಮೊಟ್ಟೆಗಳು ಇದ್ದವು. ಆ ಎಲ್ಲಾ 634 ವಿವಿಧ ಪ್ರಭೇದದ ಪಕ್ಷಿಯ ಮೊಟ್ಟೆಗಳ ಬಣ್ಣಗಳನ್ನು

ದಾಖಲಿಸಲಾಯಿತು. ಈ ಮಾಹಿತಿಯನ್ನು ಪ್ರಪಂಚ ಭೂಪಟದಲ್ಲಿ ಚಿತ್ರಿಸಲಾಯಿತು. ಆ ಭೂಪಟ ಇಲ್ಲಿ ತೋರಿಸಿದೆ. ಇಲ್ಲಿ ಗಮನಿಸಿದರೆ ನೀವೇ ಹೇಳಬಹುದು. ಉತ್ತರ ಧ್ರುವದಂತಹ ಶೀತ ವಲಯಗಳಲ್ಲಿ ಪಕ್ಷಿಯ ಮೊಟ್ಟೆಯ ಬಣ್ಣ ಗಾಢವಾಗಿದೆ. ಅದನ್ನು ಕಾಫಿ ಬಣ್ಣದ ಛಾಯೆಗಳಲ್ಲಿ (Shades) ಗುರುತಿಸಲಾಗಿದೆ. ಹಾಗೂ ಉಷ್ಣವಲಯಗಳಲ್ಲಿರುವ ಪಕ್ಷಿಯ ಮೊಟ್ಟೆಯ ಬಣ್ಣ ತಿಳಿಯಾಗಿವೆ. ಅದನ್ನು ನೀಲಿ ಬಣ್ಣದ ಛಾಯೆಗಳಲ್ಲಿ ಗುರುತಿಸಲಾಗಿದೆ. ಇದರಿಂದ ಸುಲಭವಾಗಿ ನಾವು ಹೀಗೆ ಅರ್ಥೈಸಿಕೊಳ್ಳಬಹುದು, ಮೊಟ್ಟೆಯ ಬಣ್ಣ ಆ ಪ್ರದೇಶದ ಉಷ್ಣತೆಗೆ ತಕ್ಕಂತೆ ಬದಲಾಗಿವೆ. ಸ್ವಾಭಾವಿಕವಾಗಿ ಹೀಗೆ ಪಕ್ಷಿಗಳ ಮೊಟ್ಟೆಗಳು ಬಣ್ಣ ಬಣ್ಣಗಳಲ್ಲಿ ಕಾರಣ ಅಥವಾ ಕಾರಣವಿಲ್ಲದೆ ಮಾತ್ರ ಇಲ್ಲ. ಇದರಿಂದ ಪಕ್ಷಿಯ ಮೊಟ್ಟೆಗೆ ಏನೋ ಉಪಯೋಗವಿರಬಹುದು. ಯೋಚಿಸಿ ನೋಡೋಣ...




ಹೌದು ನಿಮ್ಮ ಊಹೆ ಸರಿಯಾಗಿದೆ. ಶೀತ ಪ್ರದೇಶಗಳಲ್ಲಿ ಮೊಟ್ಟೆಗಳು ಗಾಢ ಬಣ್ಣದಲ್ಲಿರುವುದರಿಂದ ಆ ಮೊಟ್ಟೆ ಚೆನ್ನಾಗಿ/ಹೆಚ್ಚಾಗಿ ಸೂರ್ಯನ ಶಾಖವನ್ನು ಹೀರಿ ಹೆಚ್ಚು ಸಮಯದವರೆಗೆ ಹಿಡಿದಿಟ್ಟುಕೊಳ್ಳಬಹುದು. ಕಪ್ಪು ಅಥವಾ ಗಾಢ ಬಣ್ಣದ ಬಟ್ಟೆ ಧರಿಸಿ ನಾವು ಬಿಸಿಲಿನಲ್ಲಿ ನಿಂತ ಹಾಗೆ. ಅನುಭವ ಆಗಿರಬೇಕಲ್ಲವೇ? ಸರಿ ಅದರಿಂದ ಮೊಟ್ಟೆಗೆ ಉಪಯೋಗವೇನು? ಎನ್ನುತ್ತೀರಾ.. ಉಪಯೋಗ ಇದೆ. ಹಳ್ಳಿಯ ಜನರಿಗೆ ಇದು ಸಾಮಾನ್ಯ ಜ್ಞಾನ, ಮೊಟ್ಟೆಗೂ ಮತ್ತು ಉಷ್ಣತೆಗೂ ಅವಿನಾಭಾವ ಸಂಬಂಧವಿದೆ. ಅದು ಎಷ್ಟು ಮುಖ್ಯವೆಂದು ಪ್ರಾರಂಭದಲ್ಲೇ ಹೇಳಿರುವ ಘಟನೆಯಲ್ಲಿ ವಿವರಿಸಿದ್ದೇನೆ. ಸರಿಯಾದ ಉಷ್ಣತೆ ಮೊಟ್ಟೆಗೆ ದೊರಕದೇ ಇದ್ದರೆ ಮೊಟ್ಟೆ ಒಡೆದು ಮರಿಯಾಗಲು ಸಾಧ್ಯವಿಲ್ಲ. ಹೀಗಿರುವಾಗ ಮಂಜಿನಿಂದ ಕೂಡಿರುವ ಧ್ರುವ ಪ್ರದೇಶಗಳಲ್ಲಿ ಕಾವಿಗೆ ಕೂತಿರುವ ಪಕ್ಷಿ ಊಟವನ್ನು ಅರಸಿ ಹೋಗಬೇಕಲ್ಲವೇ? ಆಗ ಮೊಟ್ಟೆಯ ಉಷ್ಣಾಂಶ ಗಂಭೀರವಾಗಿ ಇಳಿಯುವ ಸಾಧ್ಯತೆ ಹೆಚ್ಚಿರುತ್ತದೆ. ಅಂತಹ ಸಮಯದಲ್ಲಿ ಮೊಟ್ಟೆಯ ಬಣ್ಣ ಗಾಢವಾಗಿದ್ದರೆ, ಮೊಟ್ಟೆಯ ಉಷ್ಣಾಂಶ ಇನ್ನೂ ಕೆಲವು ನಿಮಿಷಗಳ ಕಾಲ ಹಾಗೆ ಉಳಿಯುತ್ತದೆ. ಹೀಗೆ ತಾಯಿ ಪಕ್ಷಿಗೆ ಸಿಗುವ ಈ ಕೆಲವು ನಿಮಿಷಗಳು ಅವುಗಳ ಜೀವ ಉಳಿಸುವ ಸಂಜೀವಿನಿ ಕ್ಷಣಗಳೇ ಆಗಿವೆ. ವಿಷಯ ಸಣ್ಣದೆನಿಸಿದರೂ ಪ್ರಕೃತಿಯಲ್ಲಿ ಅದೇ ವಿಚಾರ ಒಂದು ಜೀವದ ಅಥವಾ ಒಂದು ಪೀಳಿಗೆಯ ಅಳಿವು-ಉಳಿವಿನ ಪ್ರಶ್ನೆಯಾಗಿದೆ.

ಹಾಗೆಂದ ಮಾತ್ರಕ್ಕೆ ಮೊಟ್ಟೆಯ ವಿವಿಧ ಬಣ್ಣಗಳ ಕೆಲಸ ಕೇವಲ ಇಷ್ಟೇ ಎಂದೇನಲ್ಲ. ಇದು ಸಂಶೋಧನೆಯ ಹೆಸರಲ್ಲಿ ಕೆಲವು ಸಂಶೋಧಕರು ಮಾಡಿದ ಪ್ರಯತ್ನಕ್ಕೆ, ಪ್ರಕೃತಿಯ ಬಗೆಗಿನ ವಿಸ್ಮಯಗಳ ಅನಂತ ಪುಟಗಳ ಪುಸ್ತಕದಲ್ಲಿ, ಪ್ರಕೃತಿ ತೆರೆದ ಒಂದೇ ಒಂದು ಪುಟ ಮಾತ್ರ . ಇನ್ನೂ ಓದಲು ಇಚ್ಛಿಸುವವರು ಮುಂದುವರೆಯಬಹುದು...

**ಮೂಲ ಲೇಖನ:** ScienceNewsforStudents



**ಲೇಖನ:** ಜೈಕುಮಾರ್ ಆರ್.
ಡಬ್ಲ್ಯೂ.ಸಿ.ಜಿ. ಬೆಂಗಳೂರು

# ಮುಂಜಾನೆ ಮಂಜಲ್ಲಿ

ಮುಂಜಾನೆ ಮಂಜಲ್ಲಿ
ಇಬ್ಬನಿಯ ರಂಗವಲ್ಲಿ
ತಾ ನಗುತ ಬಂದಿಹನಿಲ್ಲಿ
ನೇಸರನು ಹೊಸ ರಂಗು ಚೆಲ್ಲಿ||

ಹೊಲಗಳ ನಡುವಲ್ಲಿ
ರೈತನ ಪರಿಶ್ರಮ ಗೊಣಬೆಗಳಲ್ಲಿ
ಚುಮು ಚುಮು ಚಳಿಯಲ್ಲಿ
ಮೈಯೊಡ್ಡಿ ನಿಂತಿದೆ ಬಿಸಿಲ ಅರಸುತಲಿ||

ಮಳೆ ಬೆಳೆಗಳ ನಂಟು ನೋಡಿಲ್ಲಿ
ಭೂಮಿ ತಾಯಿಯ ಸೊಬಗು ಜೊತೆಯಲ್ಲಿ
ಸುಗ್ಗಿ ಕಾಲವು ಹಿಗ್ಗು ತರುತಲಿ
ನವ ನವೀನತೆ ತುಂಬಿದೆ ಮನ, ಮನೆ, ಪ್ರಕೃತಿಯಲ್ಲಿ||

ಸವಿ ಸಮಯ ಬಾಳಿನಲ್ಲಿ
ಕಳೆದ ಪ್ರತಿ ಘಳಿಗೆ ಪೃಥ್ವಿಯ ಮಡಿಲಲ್ಲಿ
ವಿಸ್ಮಯಗಳ ಆಗರವು ಒಡಲಲ್ಲಿ
ತಿಳಿದಷ್ಟು ಜ್ಞಾನ ಭಂಡಾರ ಭುವಿಯಲ್ಲಿ||

ಬೆಳಗಿನ ಮಬ್ಬುಗತ್ತಲಲ್ಲಿ
ಹಕ್ಕಿಗಳ ಕಲರವದಲ್ಲಿ
ತಂಪುಗಾಳಿಯ ಸ್ಪರ್ಶದಲ್ಲಿ
ಇಳೆಯು ಸೃಷ್ಟಿಸಿದೆ ಹೊಸ ಲೋಕವಿಲ್ಲಿ||

- ಪ್ರತಿಭಾ ಪ್ರಶಾಂತ್
ಉತ್ತರ ಕನ್ನಡ ಜಿಲ್ಲೆ

© ವಿಪಿನ್ ಬಾಳಿಗ

# ಪ್ರಕೃತಿ ಬಿಂಬ



**ಸಣ್ಣ ಕಳ್ಳಿಪೀರ** **© ಸಂತೋಷ್ ಎನ್.**

ಸಣ್ಣ ಕಳ್ಳಿಪೀರ ಹಕ್ಕಿಯು (Bee eaters) ಮೀರಾಪಿಡೇ ಕುಟುಂಬಕ್ಕೆ ಸೇರುತ್ತದೆ. ಇದರ ರೆಕ್ಕೆ ಮತ್ತು ನೆತ್ತಿ ಹಸಿರು-ಕಂದು ಬಣ್ಣದಿಂದ ಕೂಡಿರುತ್ತದೆ. ಹೆಸರಿಗೆ ತಕ್ಕಂತೆ ಮಧು ಸಂಗ್ರಹಣೆಗೆ ಹೊರಡುವ ಜೇನು ಹುಳುಗಳನ್ನು ಬೇಟೆಯಾಡುತ್ತವೆ. ಜೊತೆಗೆ ಇತರ ಕೀಟಗಳಾದ ಏರೋಪ್ಲೇನ್ ಚಿಟ್ಟೆ ಮತ್ತು ಪತಂಗಗಳನ್ನು ಬೇಟೆಯಾಡುತ್ತವೆ. ಈ ಹಕ್ಕಿಯು ಮರದ ಕೊಂಬೆಯ ಮೇಲೆ ಕುಳಿತು ಹಾರುತ್ತಿರುವ ಕೀಟಗಳನ್ನು ವೀಕ್ಷಿಸುತ್ತಾ, ಹುಳುಗಳನ್ನು ಕಂಡೊಡನೆ ಅಟ್ಟಾಡಿಸಿ ಹಿಡಿದು ಮತ್ತದೇ ಕೊಂಬೆ ಮೇಲೆ ಬಂದು ಕುಳಿತು ಹುಳುಗಳನ್ನು ಕೊಕ್ಕಿನಿಂದ ಕೊಂಬೆಗೆ ಹೊಡೆದು, ಹುಳುಗಳನ್ನು ಕುಕ್ಕಿ-ಸಾಯಿಸಿ ನುಂಗುತ್ತವೆ. ಇವುಗಳನ್ನು ಸ್ಥಳೀಯವಾಗಿ ನೊಣಬಾಕ, ಗಣಿಗಾರಲು ಹಕ್ಕಿ ಎಂದು ಕರೆಯುತ್ತಾರೆ. ಸಣ್ಣ ಕಳ್ಳಿಪೀರಗಳು ಬೇರೆ ಹಕ್ಕಿಗಳಂತೆ ಮರದಲ್ಲಿ ಗೂಡುಕಟ್ಟದೇ, ಮಣ್ಣಿನ ದಂಡೆಯಂಚಿನ ಬಿಲಗಳಲ್ಲಿ ಗೂಡು ಮಾಡಿ ಸಾಮೂಹಿಕವಾಗಿ ಜೀವಿಸುತ್ತವೆ.



**ಚಮಚದ ಕೊಕ್ಕು** **© ಸಂತೋಷ್ ಎನ್.**

ಚಮಚದ ಕೊಕ್ಕು (ಸ್ಪೂನ್ ಬಿಲ್) ಹಕ್ಕಿಯು ಕೆಂಬರಲುಗಳು (ಐಬೀಸ್ ಮತ್ತು ಸ್ಪೂನ್ ಬಿಲ್) ಪ್ರಭೇದಕ್ಕೆ ಸೇರಿರುವ ಹಕ್ಕಿಯಾಗಿದೆ. ಇದರ ದೇಹ, ಕೊಕ್ಕು ಮತ್ತು ಕಾಲುಗಳನ್ನು ಹೊರತುಪಡಿಸಿ ಮೈಯೆಲ್ಲಾ ಬಿಳಿ ಬಣ್ಣದ್ದಾಗಿದ್ದು, ಕೊಕ್ಕಿನ ತುದಿ ಹಳದಿ ಬಣ್ಣದಿಂದ ಕೂಡಿರುತ್ತದೆ. ಈ ಪಕ್ಷಿಯ ಮೂಲ ಯುರೋಪ್ ದೇಶಗಳಾದ ಇಂಗ್ಲೆಂಡ್, ಸ್ಪೇನ್, ಆಸ್ಟ್ರೀಯ, ಹಂಗೇರಿ ಮತ್ತು ಗ್ರೀಸ್. ಇವು ಚಳಿಗಾಲದಲ್ಲಿ ಉಷ್ಣವಲಯದ ದೇಶಗಳಾದ ಆಫ್ರಿಕಾ ಮತ್ತು ಭಾರತಕ್ಕೆ ವಲಸೆ ಬರುತ್ತದೆ. ಕರ್ನಾಟಕದ ರಂಗನತಿಟ್ಟು ಕೂಡ ಇವುಗಳಿಗೆ ಆಶ್ರಯ ತಾಣ. ಇದರ ಕಾಲುಗಳು ಕೊಕ್ಕರೆಯಂತೆ ತೆಳ್ಳಗಿದ್ದು, ಕಡಿಮೆ ಆಳದ ಜಲ ಪ್ರದೇಶಗಳಲ್ಲಿ, ಬಂಡೆಗಳ ನಡುವೆ ಓಡಾಡಲು ಸಹಾಯಕವಾಗಿವೆ. ಇದರ ಮುಖ್ಯ ಆಹಾರ ಚಿಕ್ಕ ಮೀನು, ಏಡಿ, ಕಪ್ಪೆ, ಸೀಗಡಿ ಮತ್ತು ಇತರ ಜಲಚರಗಳಾಗಿವೆ. ಈ ಪಕ್ಷಿಯು ಇತರ ಪಕ್ಷಿಗಳಂತೆ ಜಲಚರಗಳನ್ನು ಹೊಂಚುಹಾಕಿ ಹಿಡಿಯದೇ ಕೊಕ್ಕನ್ನು ನೀರಿನಲ್ಲಿ ಮುಳುಗಿಸಿ-ಮೇಲೆತ್ತಿ ನೀರನ್ನು ಸೋಸುತ್ತದೆ. ಆಗ ಸಣ್ಣ ಮೀನು, ಕಪ್ಪೆ ಯಂತಹ ಚಿಕ್ಕ ಜಲಚರಗಳು ಇದರ ಬಾಯಿಗೆ ಬೀಳುತ್ತವೆ. ಇದು ನೀರಿನ ನಡುಗಡ್ಡೆಗಳಂತಹ ನೆಲಮಟ್ಟದಲ್ಲಿ ಜಲಸಸ್ಯಗಳ ನಡುವೆ ಗೂಡು ಕಟ್ಟುತ್ತದೆ.



**ಉಲಿಯಕ್ಕಿ** **© ಸಂತೋಷ್ ಎನ್.**

ಉಲಿಯಕ್ಕಿ ಪಕ್ಷಿಯ ವಾಸಸ್ಥಾನವು ಭಾರತ, ಪಾಕಿಸ್ತಾನದಿಂದ ದಕ್ಷಿಣ ಚೀನಾವರೆಗೆ ವಿಸ್ತರಿಸಲ್ಪಡುತ್ತದೆ. ಈ ಹಕ್ಕಿಯು ಜೌಗುಪ್ರದೇಶ, ಹುಲ್ಲುಗಾವಲು ಮತ್ತು ಮರಗಳಿಂದ ಆವೃತವಾದ ಕಾಡಿನಲ್ಲಿ ಕಂಡುಬರುತ್ತದೆ. ನಾಗರಿಕ ವಾಸಸ್ಥಾನಗಳಿರುವ ಉದ್ಯಾನವನಗಳಲ್ಲಿ ಕೂಡ ಕಂಡುಬರುತ್ತದೆ. ಚಿಕ್ಕದಾದ ಕೊಕ್ಕು, ಉದ್ದವಾದ ಬಾಲದ ರೆಕ್ಕೆ, ಬಲಿಷ್ಠವಾದ ಕಾಲುಗಳು, ಆಹಾರ ಅನ್ವೇಷಣೆ ಸಂದರ್ಭದಲ್ಲಿ ಪೊದೆ, ಗಿಡ ಮತ್ತು ಹುಲ್ಲಿನ ಗರಿಗಳ ಮೇಲೆ ನೆಗೆಯಲು ಸಹಾಯಕವಾಗಿವೆ. ಇದು ಗಿಡ-ಗಂಟೆ ನಡುವೆ ನೆಗೆಯುವಾಗ "ಚಿಕ್ಚಿಕ್" ಎಂದು ಸದ್ದನ್ನು ಹೊರಡಿಸುತ್ತದೆ. ಈ ಹಕ್ಕಿಯು ಆಹಾರವಾಗಿ ಹುಳು-ಹುಪ್ಪಟೆಗಳನ್ನು ಮತ್ತು ಹೂವಿನ ಮಕರಂದವನ್ನು ಸೇವಿಸುತ್ತದೆ.

**ಚಿತ್ರ-ಲೇಖನ: ಸಂತೋಷ್ ಎನ್.**
ಬೆಂಗಳೂರು ಜಿಲ್ಲೆ

# ನೀವೂ ಕಾನನಕ್ಕೆ ಬರೆಯಬಹುದು




ಭೂಮಿಯ ಮೇಲಿನ ವೈವಿಧ್ಯತೆಗೆ ಬೆರಗಾಗದವರು ಯಾರು?.

"ಸ್ವರ್ಗವೇ... ಭೂಮಿಯೊಳಿರದಿರೇ ನೀನು... ಮೇಲೆಲ್ಲಿಯೂ ನೀನಿಲ್ಲ ಇಲ್ಲ... ಇಲ್ಲ..." ಎಂದು ಕುವೆಂಪು ಬರೆದಿರುವುದು ಕೇವಲ ಅವರ ಕಲ್ಪನೆಯಲ್ಲ. ನೀಲಿ ಗ್ರಹ ಎಂದು ಕರೆಯಲ್ಪಡುವ ನಮ್ಮ ಭೂಮಿಗೆ 4.5 ಬಿಲಿಯನ್ ವರ್ಷಗಳ ಇತಿಹಾಸವಿದ್ದು, ಇಡೀ ಸೌರಮಂಡಲದಲ್ಲೇ ಜೀವಿಗಳು ಉಗಮಿಸಲು, ಜೀವಿಸಲು ಎಲ್ಲಾ ರೀತಿಯ ವ್ಯವಸ್ಥೆಗಳನ್ನು ಹೊಂದಿರುವಂತಹ ಏಕೈಕ ಗ್ರಹವಾಗಿದೆ. ಅನೇಕ ವಿಶೇಷತೆಗಳನ್ನು ತನ್ನಲ್ಲಿ ಹುದುಗಿಸಿಕೊಂಡಿರುವ ಭೂಮಿ ತನ್ನಲ್ಲಿ ಅಡಕವಾಗಿರುವ ಪ್ರಾಕೃತಿಕ ರಹಸ್ಯಗಳನ್ನು ಅನ್ವೇಷಿಸುವ ವಿಜ್ಞಾನಿಗಳಿಗೆ ಅವರ ಕಲ್ಪನೆಗೂ ಮೀರಿದ ವಿಷಯಗಳನ್ನು ಪ್ರದರ್ಶಿಸುತ್ತಾ ಅಚ್ಚರಿ ಮೂಡಿಸುತ್ತಿದೆ.

ಭೂಮಿಯಲ್ಲಿ ಇರುವಂತೆಯೇ ಬೇರೆ ಗ್ರಹದಲ್ಲಿ ತನ್ನ ಅಸ್ತಿತ್ವ ಸಾಧಿಸಲು ಯೋಚಿಸುತ್ತಿರುವ ಮಾನವ, ತನಗೆ ತಿಳಿದೋ ತಿಳಿಯದೆಯೋ ಪರಿಸರ ವ್ಯವಸ್ಥೆಯನ್ನು ಹಾಳು ಮಾಡಿ, ಇತರ ಜೀವಿಗಳಿಗೆ ತೊಂದರೆ ಮಾಡುತ್ತಿದ್ದಾನೆ. ಭೂಮಿಯಲ್ಲಿ ಎಲ್ಲ ಜೀವಿಗಳು ಜೀವಿಸಲು ಸಮನಾದ ಹಕ್ಕನ್ನು ಹೊಂದಿವೆ. ಭೂಮಿಯ ಅನನ್ಯತೆಯನ್ನು ಅದರ ಅದ್ಭುತ ಜೀವವೈವಿಧ್ಯತೆಗಳನ್ನು ಅರ್ಥಮಾಡಿಕೊಳ್ಳಲು ಮತ್ತು ಪ್ರಶಂಸಿಸಲು, ಭೂಮಿಯ ಮೇಲಿನ ನೈಸರ್ಗಿಕ ಸಂಪನ್ಮೂಲಗಳ ಸಮರ್ಪಕ ಬಳಕೆಯ ಬಗ್ಗೆ ಜಾಗೃತಿ ಮೂಡಿಸಲು ಏಪ್ರಿಲ್ 22 ರನ್ನು ಅಂತರರಾಷ್ಟ್ರೀಯ ಭೂಮಿ ದಿನವನ್ನಾಗಿ ಆಚರಿಸಲಾಗುತ್ತದೆ.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಸಂಚಿಕೆಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.magwork@gmail.com

**ಅಂಚೆ ವಿಳಾಸ**:

Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ : 560083. ಗೆ ಕಳಿಸಿಕೊಡಬಹುದು.